# ದೂರು-ದುಮ್ಮಾನ

## ಏಕಮುಖ ಸಂಚಾರ ರದ್ದುಪಡಿಸಿ

ಹುಬ್ಬಳ್ಳಿ: ಇಲ್ಲಿನ ದೇಶಪಾಂಡೆನಗರದಲ್ಲಿ ಜಾರಿಗೊಳಿಸಲಾದ ಏಕಮುಖ ಸಂಚಾರವನ್ನು ಕೂಡಲೇ ರದ್ದುಪಡಿಸಬೇಕು.

ಈ ಏಕಮುಖ ಸಂಚಾರದಿಂದ ಕಾಟನ್ ಮಾರ್ಕೆಟ್ ಕಡೆಯಿಂದ ರಾಮದೂತ ಕಾಂಪ್ಲೆಕ್ಸ್ ಹಿಂದುಗಡೆ ಹಾಯ್ದು ಬರುವ ರಸ್ತೆಯು ಇಕ್ಕಟ್ಟಾಗಿದ್ದರೂ ಲಾರಿಗಳು, ಟೆಂಪೋಗಳು ನಿಂತಿರುವುದರಿಂದ ಸಾರ್ವಜನಿಕರಿಗೆ ಸಂಚರಿಸಲು ತೀವ್ರ ತೊಂದರೆಯಾಗುತ್ತಿದೆ.

ಅದೇ ರೀತಿ ಸರ್ಕ್ಯೂಟ್ ಹೌಸ್ ಹಿಂದೆ ಇರುವ ಕಾಮಾಕ್ಷಿ ದೇವಾಲಯದ ರಸ್ತೆಯ ಮೂಲಕ ಅನೇಕ ವಾಹನಗಳು ಸಂಚರಿಸುತ್ತಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗಿದೆ.

ಆದ್ದರಿಂದ ಕೆ.ಎಸ್.ಆರ್.ಟಿ.ಸಿ. ಬಸ್‌ಗಳನ್ನು ಏಕಮುಖ ಸಂಚಾರಕ್ಕೆ ಅಳವಡಿಸಿ ಉಳಿದ ವಾಹನಗಳಿಗೆ ಏಕಮುಖ ಸಂಚಾರವನ್ನು ತೆರವುಗೊಳಿಸಬೇಕು.

ಶರಣಕುಮಾರ ಕಂದಕೂರ

## ಹೊಸ ಮೂತ್ರಾಲಯ ಕಟ್ಟಿಸಿ

ಹುಬ್ಬಳ್ಳಿ: ಇಲ್ಲಿನ ವೀರಾಪುರ ಓಣಿಯಲ್ಲಿದ್ದ ಸಾರ್ವಜನಿಕ ಮೂತ್ರಾಲಯವನ್ನು ಒಡೆದು ಹಾಕಿರುವುದರಿಂದ ಸಾರ್ವಜನಿಕರಿಗೆ ತೀವ್ರ ತೊಂದರೆಯಾಗಿದೆ.

ಮೂತ್ರಾಲಯವನ್ನು ಒಡೆದು ಹಾಕಿರುವುದರಿಂದ ಸಾರ್ವಜನಿಕರು ಪ್ರಮುಖ ರಸ್ತೆ ಬದಿಯಲ್ಲಿ, ಶಾಲಾ ಆವರಣದಲ್ಲಿ ಮೂತ್ರ ವಿಸರ್ಜನೆ ಮಾಡುತ್ತಿರುವುದರಿಂದ ನಿವಾಸಿಗಳಿಗೆ, ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿದೆ.

ಆದ್ದರಿಂದ ಮಹಾನಗರ ಪಾಲಿಕೆಯು ಶೀಘ್ರವಾಗಿ ಹೊಸದಾಗಿ ಸಾರ್ವಜನಿಕ ಮೂತ್ರಾಲಯವನ್ನು ಕಟ್ಟಿಸಬೇಕು.

ಈರಣ್ಣ ದಂಗ್ರೋಜಿ

## ಬಸ್ ಸಂಚಾರ ಕಲ್ಪಿಸಿ

ಮುಳಮುತ್ತಲ: ಮುಳಮುತ್ತಲ ಗ್ರಾಮಕ್ಕೆ ಧಾರವಾಡದಿಂದ ಪ್ರತಿದಿನ ಮುಂಜಾನೆ 8-30ಕ್ಕೆ ಬಸ್ ಸಂಚಾರ ಕಲ್ಪಿಸಬೇಕೆಂದು ಹಲವಾರು ಬಾರಿ ಒತ್ತಾಯಿಸಿದ್ದರೂ ಯಾವುದೇ ಕಾರ್ಯಕೈಗೊಂಡಿಲ್ಲ.

ಗ್ರಾಮಕ್ಕೆ ಬಸ್ ಸಂಚಾರ ಕಲ್ಪಿಸುವ ಕುರಿತು ಗ್ರಾಮಸ್ಥರು ಅನೇಕ ಬಾರಿ ವಿನಂತಿಸಿದ್ದರೂ ಪ್ರಯೋಜನವಾಗಿಲ್ಲ. ಆದ್ದರಿಂದ ಸಂಬಂಧಪಟ್ಟ ಅಧಿಕಾರಿಗಳು ಇನ್ನು ಮುಂದೆಯಾದರೂ ಬಸ್ ಓಡಿಸಿ ಗ್ರಾಮಸ್ಥರಿಗೆ ಅನುಕೂಲ ಮಾಡಿಕೊಡಬೇಕು.

ಶಿವಯ್ಯಾ ಬ. ಮುದಕಯ್ಯನವರ

## ಡಾಂಬರೀಕರಣ ಮಾಡಿ

ಬು. ತರ್ಲಘಟ್ಟ ಗ್ರಾಮದ ರಸ್ತೆ ಡಾಂಬರೀಕರಣವನ್ನು ಕಳೆದ ಮೂರು ತಿಂಗಳ ಹಿಂದೆಯೇ ಕೈಗೊಳ್ಳಲಾಗುತ್ತದೆ ಎಂದು ಭರವಸೆ ನೀಡಿದ್ದರೂ ಇದುವರೆಗೆ ಯಾವುದೇ ಕಾರ್ಯ ನಡೆದಿಲ್ಲ.

ಗ್ರಾಮದ ರಸ್ತೆ ಡಾಂಬರೀಕರಣ ಕುರಿತು ಸಂಬಂಧಪಟ್ಟ ಶಾಸಕರು, ಅಧಿಕಾರಿಗಳು ಇನ್ನು ಮುಂದೆಯಾದರೂ ಶೀಘ್ರವಾಗಿ ಡಾಂಬರೀಕರಣ ಕಾರ್ಯಕ್ಕೆಗೆತ್ತಿಕೊಳ್ಳಲಿ.

ಯುವಶಕ್ತಿ ಯುವಕ ಮಂಡಳ

## ಸಮಯಕ್ಕೆ ಸರಿಯಾಗಿ ಬಸ್ ಓಡಿಸಿ

ಉಮಚಗಿ: ಈ ಗ್ರಾಮಕ್ಕೆ ಹುಬ್ಬಳ್ಳಿ ಹಳೇ ಬಸ್ ನಿಲ್ದಾಣದಿಂದ ಸರಿಯಾದ ಸಮಯಕ್ಕೆ ಬಸ್‌ಗಳನ್ನು ಓಡಿಸಬೇಕು.

ಹುಬ್ಬಳ್ಳಿಯಿಂದ 30 ಕಿ.ಮೀ. ಯಷ್ಟೇ ದೂರವಿರುವ ಉಮಚಗಿ-ಕೊಂಕಣಕುರಹಟ್ಟಿ ಗ್ರಾಮಕ್ಕೆ ಸಕಾಲದಲ್ಲಿ ಬಸ್ ಸಂಚಾರವನ್ನು ಒದಗಿಸಿ ಗ್ರಾಮಸ್ಥರಿಗೆ ಅನುಕೂಲ ಮಾಡಿಕೊಡಬೇಕು.

ಶಿವಪ್ಪ ಸುರಣಗಿ

# ಪದಾಧಿಕಾರಿಗಳು

ಆನಂದನಗರ ರಸ್ತೆಯ ಸಯ್ಯದ್ ಫತೇಶಾವಲಿನಗರ ಹಿತಾಭಿವೃದ್ಧಿ ಸಂಘ ಎ.ಎಚ್. ಶೇಖ (ಅಧ್ಯಕ್ಷ), ಜಿ.ಟಿ. ಗುತ್ತಲ (ಉಪಾಧ್ಯಕ್ಷ), ಡಿ.ಎಚ್. ಅಕ್ಕೂರ (ಕಾರ್ಯದರ್ಶಿ), ಸಿ.ಜಿ. ಬಿಲವಸಾರ (ಉಪಕಾರ್ಯದರ್ಶಿ), ಎಸ್.ಸಿ. ಹಿರೇಮಠ (ಖಜಾಂಚಿ).

ಕ್ಯೂ.ಡಿ. ಮುಚಾಲಿ, ಆರ್.ಎಚ್. ಹವಾಲ್ದಾರ, ಎಂ.ಜಿ. ಬೋಜಿ, ಎಲ್.ಬಿ. ಇನಾಮದಾರ, ಎಸ್.ಎಲ್. ಗಾಳಿ, ಐ.ಎ. ಕರಜಗಿ, ಎಂ.ಎಂ. ಶಿರೂರ, ಶ್ರೀಮತಿ ದೀಪಾ ಬಿಂದು ಸಾರನ್ (ಸದಸ್ಯರು).

ನೇಕಾರನಗರದ ಶ್ರೀ ದತ್ತಾತ್ರೇಯ ಸಂಯುಕ್ತ ಸೇವಾ ಸಂಘ ಸೈದಪ್ಪ ಚನ್ನಪ್ಪ ಬೆಸ್ತರ (ಅಧ್ಯಕ್ಷ), ಶಿವಪ್ಪ (ಉಪಾಧ್ಯಕ್ಷ), ಬಿ. ವಿರುಪಾಕ್ಷಪ್ಪ (ಪ್ರಧಾನ ಕಾರ್ಯದರ್ಶಿ), ಬಸವರಾಜ ಸವಣೂರ (ಸಹಕಾರ್ಯದರ್ಶಿ), ಚಿದಾನಂದ, ಬಗಾಡೆ (ಸಂಘಟನಾ-ಕಾರ್ಯದರ್ಶಿ), ಬಸವಂತಪ್ಪಾ ಗಡೇದ (ಲೆಕ್ಕಪತ್ರಾಸಿಗ), ಶ್ರೀಮತಿ ಲಲಿತಾ ಸುಂಕದ (ಮಹಿಳಾ ಸಂಘಟಕಿ) ಧಾರವಾಡ ಜಿಲ್ಲಾ ಸ್ವಾತಂತ್ರ್ಯ ಯೋಧರ ಸಂಘ ಜಿ.ವಿ. ದೇಶಪಾಂಡೆ (ಅಧ್ಯಕ್ಷ), ಸಿ.ಎಚ್. ದಾಸರ (ಉಪಾಧ್ಯಕ್ಷರು), ಎಂ.ಆರ್. ಶೆಟ್ಟರ, (ಕಾರ್ಯಾಧ್ಯಕ್ಷರು) ಆರ್.ಎಸ್. ಬೆಳ್ಳದವಾಡ (ಕೋಶಾಧ್ಯಕ್ಷ) ರಂಗರಾವ್ ಕುಲಕರ್ಣಿ (ಕಾರ್ಯದರ್ಶಿ), ಕೆ.ಎಸ್. ಬುಲಬುಲೆ (ಸಹಕಾರ್ಯದರ್ಶಿ), ಇಮಾಮಸಾಬ ಬಳ್ಳೂರ ವೈ.ಜಿ. ಸುಣಗಾರ (ಜಂಟಿ ಕಾರ್ಯದರ್ಶಿಗಳು).

ವಿ.ಬಿ. ತುರಮರಿ, ಕೆ.ಎಂ. ದೀಕ್ಷಿತ, ಎಸ್.ಕೆ. ಪಾಟೀಲ, ಎನ್.ಎಂ. ಅಕ್ಕಲಕೋಟ (ಸಲಹಾ ಸಮಿತಿ ಸದಸ್ಯರು).

**ನೇಮಕ:** ಹುಬ್ಬಳ್ಳಿ-ಧಾರವಾಡ ಮಹಾನಗರ ಜಿಲ್ಲಾ ಯುವ ಕಾಂಗ್ರೆಸ್ ಸಮಿತಿಯ ಸಂಘಟನಾ ಕಾರ್ಯದರ್ಶಿಗಳಾಗಿ ನಾಗೇಶ ಕಟ್ಟಿಮನಿ ಮತ್ತು ಗಣೇಶ್ ದೊಡಮನಿ ಅವರನ್ನು ನೇಮಕಮಾಡಲಾಗಿದೆ ಎಂದು ಸಮಿತಿಯ ಅಧ್ಯಕ್ಷ ಸದಾನಂದ ಡಂಗನವರ ತಿಳಿಸಿದ್ದಾರೆ.

ಹುಬ್ಬಳ್ಳಿ ಧಾರವಾಡ ಮಹಾನಗರ ಜಿಲ್ಲಾ ಯುವ ಜನತಾದಳ (ಜಾ)ದ ಹಿರಿಯ ಉಪಾಧ್ಯಕ್ಷರನ್ನಾಗಿ ರಾಜು ಅಮರಾವತಿ ಅವರನ್ನು ನೇಮಕ ಮಾಡಲಾಗಿದೆ.

ಹುಬ್ಬಳ್ಳಿ ಧಾರವಾಡ ಮಹಾನಗರ ಜಿಲ್ಲಾ ಜಾತ್ಯಾತೀತ ಜನತಾದಳದ ನೂತನ ಪ್ರಧಾನ ಕಾರ್ಯದರ್ಶಿಯಾಗಿ ಚೆನ್ನಬಸಪ್ಪ ರೇವಣ್ಣವರ ಅವರನ್ನು ನೇಮಕಮಾಡಲಾಗಿದೆ.

ಹುಬ್ಬಳ್ಳಿ ಧಾರವಾಡ ಮಹಾನಗರ ಜಿಲ್ಲಾ ಯುವ ಕಾಂಗ್ರೆಸ್ ಸಮಿತಿಯ ಪ್ರಧಾನ ಕಾರ್ಯದರ್ಶಿಯನ್ನಾಗಿ ಮನೋಜ ಕುಮಾರ ಕರ್ಜಗಿ ಅವರನ್ನು ನೇಮಕ ಮಾಡಲಾಗಿದೆ.

ಹುಬ್ಬಳ್ಳಿ ಧಾರವಾಡ ಮಹಾನಗರ ಜಿಲ್ಲಾ ಯುವ ಜನತಾದಳ (ಜಾ)ದ ಪ್ರಧಾನ ಕಾರ್ಯದರ್ಶಿಗಳನ್ನಾಗಿ ಬಾಬು ಕರ್ನಾಟಿ ಅವರನ್ನು ನೇಮಕ ಮಾಡಲಾಗಿದೆ.

ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಹುಬ್ಬಳ್ಳಿ ಬಸವೇಶ್ವರನಗರದ ಕಾರ್ಮಿಕ ಕಲ್ಯಾಣ ಕೇಂದ್ರದಲ್ಲಿ ಮಹಿಳೆಯರಿಗೆ ಸಬ್ಸಿಡಿ ದರದಲ್ಲಿ ಹೊಲಿಗೆ ಯಂತ್ರ ವಿತರಿಸಲಾಯಿತು. ಚಿತ್ರದಲ್ಲಿ ಜೆ.ಸಿ. ವಿರಕ್ತಮಠ, ಎಂ.ಎಂ. ಕುರಿ, ಸಿ. ಅಫಜಲ್ ಹುಸೇನ, ಕಾರ್ಮಿಕ ಅಧಿಕಾರಿ ಚಂದ್ರಕಾಂತ ವಾರದ ಮಹೇಶ, ಎಸ್.ಜಿ. ಶಿರೂರ, ಶಾಂತವ್ವ ನಾಯಕ ಮೊದಲಾದವರಿದ್ದಾರೆ.

## ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಹೊಲಿಗೆ ಯಂತ್ರ ವಿತರಣೆ

ಹುಬ್ಬಳ್ಳಿ, 11- ಇಲ್ಲಿಯ ಬಸವೇಶ್ವರ ನಗರದ ಕಾರ್ಮಿಕ ಕಲ್ಯಾಣ ಕೇಂದ್ರದಲ್ಲಿ ಕಾರ್ಮಿಕರ ಅವಲಂಬಿತ ಫಲಾನುಭವಿಗಳಿಗೆ ಸಬ್ಸಿಡಿ ದರದ ಹೊಲಿಗೆ ಯಂತ್ರ ವಿತರಣಾ ಕಾರ್ಯಕ್ರಮ ಇತ್ತೀಚೆಗೆ ಜರುಗಿತು. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯು ಒಟ್ಟು ಹದಿನಾಲ್ಕು ಫಲಾನುಭವಿಗಳನ್ನು ಆಯ್ಕೆ ಮಾಡಿ ಅವರಿಗೆ ಹೊಲಿಗೆ ಯಂತ್ರಗಳನ್ನು ಒದಗಿಸಿತ್ತು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಕಾರ್ಮಿಕ ಅಧಿಕಾರಿ ಚಂದ್ರಕಾಂತ ವಾರದ ಅವರು ಫಲಾನುಭವಿಗಳಿಗೆ ಹೊಲಿಗೆ ಯಂತ್ರ ವಿತರಿಸಿದರು. ಹಿರಿಯ ಕಾರ್ಮಿಕ ನಿರೀಕ್ಷಕ ಮಹೇಶ ಹಾಗೂ ಅಫಜಲ ಹುಸೇನ್ ಮುಖ್ಯ ಅತಿಥಿಗಳಾಗಿದ್ದರು. ಎಸ್.ಜಿ. ಶಿರೂರ ಹಾಗೂ ಜೆ.ಸಿ. ವಿರಕ್ತಮಠ ಕಾರ್ಯಕ್ರಮ ನಡೆಸಿಕೊಟ್ಟರು. ಎಲ್.ಸಿ. ಹಿರೇಮಠ, ಶ್ರೀಮತಿ ಎಂ.ಎಂ. ಕುರಿ, ಶ್ರೀಮತಿ ಶೈಲಜಾ ಶೆಟ್ಟಿ, ಎಸ್.ಆರ್. ತೆಲಗರ, ಬಿ.ಎಸ್. ನಾಡಗೌಡ, ಎಸ್.ಟಿ. ಭಜಂತ್ರಿ ಇವರು ಕಾರ್ಯಕ್ರಮ ಸಂಘಟಿಸಿದ್ದರು.

ಕರ್ನಾಟಕ ರಾಜ್ಯ ಸರಕಾರಿ ನೌಕರರ ಸಂಘದ ಅಧ್ಯಕ್ಷ ಕೆ. ಚಿಕ್ಕೇಗೌಡ ಅವರು ಈಚೆಗೆ ಧಾರವಾಡಕ್ಕೆ, ಬಂದಾಗ ಜಿಲ್ಲಾ ಖಜಾನೆ ನೌಕರರ ಸಂಘದ ಅಧ್ಯಕ್ಷ ಕೆ.ಎಂ. ತದ್ದೇವಾಡಿ ಅವರು ಸತ್ಕರಿಸಿದರು.

ಧಾರವಾಡ ತಾಲೂಕಿನ ಮುರಕಟ್ಟಿಯಲ್ಲಿ ಬಸ್ ತಂಗುದಾಣವನ್ನು ಶಾಸಕ ಶಿವಾನಂದ ಅಂಬಡಗಟ್ಟಿ ಈಚೆಗೆ ಉದ್ಘಾಟಿಸಿದರು. ವಿನಯ ಕುಲಕರ್ಣಿ, ಗಾಡ್ ಫ್ರೆಡ್ ವಿಕ್ಟರ್‌ಸಿಂಗ್ ಚಿತ್ರದಲ್ಲಿದ್ದಾರೆ.

ಮೂಡಬಿದರೆಯ ಶ್ರೀ ಚಾರುಕೀರ್ತಿ ಭಟ್ಟಾರಕ ಪಟ್ಟಾಚಾರ್ಯ ಸ್ವಾಮಿಗಳು ಹುಬ್ಬಳ್ಳಿಯ ಅಭಿನಂದನ ಸಹಕಾರಿ ಬ್ಯಾಂಕ್‌ಗೆ ಭೇಟಿ ನೀಡಿದ್ದರು. ಬ್ಯಾಂಕಿನ ಅಧ್ಯಕ್ಷ ಬಿ.ಎ. ಧೋಖಡೆ, ಎಸ್.ಟಿ. ಆಕ್ಕಿ, ಎಂ.ಎಸ್. ಮುತ್ತಗಿ. ಕಮಲ್ ಮೆಹತಾ, ಬಿ.ಟಿ. ರಾಜಮಾನೆ ಮುಂತಾದವರು ಚಿತ್ರದಲ್ಲಿದ್ದಾರೆ.

ಇತ್ತೀಚೆಗೆ ಧಾರವಾಡದಲ್ಲಿ ಜರುಗಿದ ಕ್ರೈಸ್ತ ಬಾಂಧವರ ಕರ್ನಾಟಕ ವಾರ್ಡನ್ ದಯಾಸಿಸಿ (ಸಿ.ಎಸ್.ಐ.) ಉತ್ತರ ಕರ್ನಾಟಕ ವಿಭಾಗೀಯ ಕೌನ್ಸಿಲ್ ಅಧ್ಯಕ್ಷರಾಗಿ ರೆವರೆಂಡ್. ಜೆ.ಡಿ. ತಲಪಾಟ ಆಯ್ಕೆಯಾದ ಅವರನ್ನು ಸನ್ಮಾನಿಸಲಾಯಿತು. ಚಿತ್ರದಲ್ಲಿ ಡಾ. ಎಸ್. ಯೋಹಾನ, ಎ.ಪ್ರಕಾಶರಾವ, ಜೆ. ಸ್ವಾಮಿರಾಜ್, ಎಸ್. ಪ್ರಸನ್ನಕುಮಾರ, ಎಂ. ವಿಲಿಯಂ ಜೆ. ಅಗಸ್ಟಿನ್, ಎ. ಜೋಸೆಫ್, ವೇಮನರಾವ ಮೊದಲಾದವರಿದ್ದಾರೆ.

## ಭಾರತ ಸೇವಾದಲ ಜಿಲ್ಲಾ ಪುರಸ್ಕಾರ ಶಿಬಿರ

ಮುಗಳಿ (ಧಾರವಾಡ), 11- ಭಾರತ ಸೇವಾದಲ ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳ ಸೇವಾದಲ ಮಕ್ಕಳ ಜಿಲ್ಲಾ ಪ್ರತಿಭಾ ಪುರಸ್ಕಾರ ಶಿಬಿರವು ಮುಗಳಿಯ ಆಧ್ಯಾತ್ಮ ಆಶ್ರಮದಲ್ಲಿ ಐದು ದಿನ ನಡೆಯಿತು.

ಶಿಬಿರವನ್ನು ಪ್ರೊ.ಎಸ್.ಎಸ್. ಕುರುಬರ ಅವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಸೇವಾದಲ ಜಿಲ್ಲಾ ಉಪಾಧ್ಯಕ್ಷ ಕಾರ್ಪೋರೇಟರ್ ಶಂಕರ ಕುಂಬಿ ಗ್ರಾ.ಪಂ ಸದಸ್ಯರಾದ ಹನುಮಂತ ಜಗದಾಳೆ, ವೆಂಕವ್ವ ಕಲಾದಗಿ ಮುಖ್ಯ ಅತಿಥಿಗಳಾಗಿದ್ದರು.

ಪ್ರತಿ ದಿನ ಶಿಬಿರದಲ್ಲಿ ಬೆಳಗಿನ 5ರಿಂದ ರಾತ್ರಿ 10ರ ವರೆಗೆ ಎಡಬಿಡದೆ ಕಾರ್ಯಕ್ರಮಗಳು ನಡೆದವು. ಪ್ರಾರ್ಥನೆ, ಯೋಗ ಶಿಕ್ಷಣ, ಧ್ವಜವಂದನೆ, ನೈತಿಕ, ಆಧ್ಯಾತ್ಮಿಕ ಚಿಂತನೆ, ಬೌದ್ಧಿಕ ಪಾಠ, ಶ್ರಮದಾನ, ಶಾರೀರಿಕ ಚಟುವಟಿಕೆಗಳು, ಆಟ, ಸಾಂಸ್ಕೃತಿಕ ಕಾರ್ಯಕ್ರಮ ಇತ್ಯಾದಿಗಳು ನಡೆದವು. ಒಂದು ದಿನ ಗ್ರಾಮ ಸಂಕೀರ್ತನೆ ಮಾಡಿ ಸರ್ವರಿಗೂ ಭಾವೈಕ್ಯತೆ ಹಾಗೂ ಸೇವಾ ಭಾವನೆ ಬಗ್ಗೆ ಸಂದೇಶ ತಲುಪಿಸಲಾಯಿತು. ಮುಗಳಿ ಶಾಲೆ ಮಕ್ಕಳೂ ಇದರಲ್ಲಿ ಭಾಗವಹಿಸಿದ್ದರು.

ಶಿಬಿರಾವಧಿಯಲ್ಲಿ ಹಲವಾರು ಮಹನೀಯರು ಭೇಟಿ ನೀಡಿ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು. ದೈಹಿಕ ಶಿಕ್ಷಣಾಧಿಕಾರಿ ಎಸ್.ಎಸ್. ಪಟ್ಟಣಶೆಟ್ಟಿ, ಸೇವಾದಲ ಜಿಲ್ಲಾ ಕಾರ್ಯದರ್ಶಿ ಸಿಂಗಣ್ಣ ಕುಂಟಿ, ಲಂಗೋಟಿ, ಬುಲಬುಲೆ, ಜಿಲ್ಲಾ ತಾಲೂಕುಗಳ ಸೇವಾದಲ ಅಧಿನಾಯಕರು, ಕಾರ್ಯದರ್ಶಿಗಳು, ಅರಣ್ಯಾಧಿಕಾರಿಗಳು, ಕಂದಾಯ ಅಧಿಕಾರಿಗಳು, ಮಂಗೋಜಿ, ಪ್ರೊ.ಎಸ್.ಎಚ್. ಬಿರಾದಾರ, ಗದಗ ಸೇವಾದಲ ಅಧ್ಯಕ್ಷ ಉಳವಪ್ಪ ಹೊಂಬಳ ಮುಂತಾದವರು ಶಿಬಿರಕ್ಕೆ ಭೇಟಿ ನೀಡಿದರು.

ಶಾರೀರಿಕ, ಬೌದ್ಧಿಕ ಪರೀಕ್ಷೆಗಳನ್ನು ರಾಜ್ಯ ಸೇವಾದಲ ಯೋಜನಾಧಿಕಾರಿ ಆರ್.ಪಿ. ಭಂಡಾರಿ ಅವರು ನಡೆಸಿ ರಾಜ್ಯ ಪುರಸ್ಕಾರಕ್ಕೆ 6 ಜನ ಮಕ್ಕಳನ್ನು ಆಯ್ಕೆ ಮಾಡಿದರು. ಮಕ್ಕಳ ಆರೋಗ್ಯ ಚೆನ್ನಿದ್ದು, ತೂಕ ಹೆಚ್ಚಾದದ್ದು ಮತ್ತು ಮಕ್ಕಳು ತುಂಬಾ ಲವಲವಿಕೆಯಿಂದ ಇರುವುದು ಕಂಡು ಬಂದಿತು.

ಭಾರತ ಸೇವಾದಲ ಧಾರವಾಡ, ಹಾವೇರಿ ಮತ್ತು ಗದಗ ಜಿಲ್ಲಾ ಸಂಘಟಕ ಬಸವರಾಜ ಮ. ಹಟ್ಟಿಗೌಡರ ಅವರು ಶಿಬಿರಾಧಿಪತಿಯಾಗಿ ಶಿಬಿರವನ್ನು ಸಂಘಟಿಸಿದ್ದರು. ತಾ.ಪಂ ಅಧ್ಯಕ್ಷ ಕೆ.ಸಿ. ಪುಡಕಲಕಟ್ಟಿ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ನೇತೃತ್ವವನ್ನು ಪ್ರೊ.ಎಸ್.ಎಸ್. ಕುರುಬರ ಅವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಭಾ.ಜ.ಪ ಧುರೀಣ ಶಿವಾನಂದ ಹೊಳೆಹಡಗಲಿ, ಕ್ಷೇತ್ರ ಶಿಕ್ಷಣಾಧಿಕಾರಿ ವೈ.ಎಸ್. ಪಾಟೀಲ, ಡಿ.ಪಿ.ಇ.ಪಿ. ಅಧಿಕಾರಿ ಬಿ.ಬಿ. ವಣ್ಣೂರ, ಸಂಸ್ಕೃತ ಕಾಲೇಜು ಪ್ರಾಚಾರ್ಯ ವೈ.ಡಿ. ನವಲಗುಂದ, ತಾ.ಪಂ ಸದಸ್ಯೆ ಪಾರವ್ವ ಅನುಪತಿ, ಗ್ರಾ.ಪಂ. ಅಧ್ಯಕ್ಷೆ ದುರ್ಗವ್ವ ಹರಿಜನ, ಉಪಾಧ್ಯಕ್ಷ ರವಿವರ್ಮ ಪಾಟೀಲ, ಸದಸ್ಯ ಹನುಮಂತ ಜಗದಾಳೆ, ವೆಂಕವ್ವ ಕಲಾದಗಿ ಅವರು ಅತಿಥಿಗಳಾಗಿ ಆಗಮಿಸಿದ್ದರು. ಗದಗ ಸೇವಾದಲ ಅಧ್ಯಕ್ಷ ಉಳವಪ್ಪ ಹೊಂಬಳ, ಜಿಲ್ಲಾ ಕಾರ್ಯದರ್ಶಿ ಸಂಗಣ್ಣ ಕುಂಟಿ ಅವರು ವಿಶೇಷ ಅತಿಥಿಗಳಾಗಿ ವೇದಿಕೆಯಲ್ಲಿದ್ದರು.

ಸರ್ವಧರ್ಮೀಯ ಪ್ರಾರ್ಥನೆಯೂ ಜರುಗಿತು. ಸೇವಾದಲ ಗುರುಮಾತೆ ಪಿ.ಕೆ. ಕಾಂಬಳೆ ಸ್ವಾಗತಿಸಿದರು. ಕೋಶಾಧ್ಯಕ್ಷ ಶಿಕ್ಷಕ ಸಂಘದ ಅಧ್ಯಕ್ಷ ಪಿ.ಪಿ. ಲಾಳಸಂಗಿ ಅವರು ಗೌರವಿಸಿದರು. ಸಿಂಗಣ್ಣ ಕುಂಟಿ, ಆರ್.ಪಿ. ಭಂಡಾರಿ ಅವರು ಪ್ರಾಸ್ತಾವಿಕ ಮಾತನಾಡಿದರು. ಶಿಬಿರಾರ್ಥಿಗಳಾದ ಭುವನೇಶ್ವರಿ ಧಾರವಾಡ ಮತ್ತು ಪರಶುರಾಮ ಮುನವಳ್ಳಿ ತಮ್ಮ ಶಿಬಿರದ ಅನುಭವ ಹೇಳಿದರು. ನಂದಾ ಕೊಣ್ಣೂರ ಶಿಬಿರದ ವರದಿ ಓದಿದರು. ಸೇವಾದಲ ತಾಲೂಕಾ ಕಾರ್ಯದರ್ಶಿ ವಿ.ಟಿ. ಚೌವಾಣ ಅವರು ವಂದಿಸಿದರು. ಜಿ.ಎಂ. ನಿಡಗುಂದಿ ಕಾರ್ಯಕ್ರಮ ನಡೆಸಿದರು. ಮಹೇಶ ಪತ್ತಾರ ಸಾಂಸ್ಕೃತಿಕ ಚಟುವಟಿಕೆ ನೇತೃತ್ವವಹಿಸಿದ್ದರು.

## ಎನ್.ಎಸ್.ಎಸ್. ರಾಷ್ಟ್ರ ಐಕ್ಯತೆಗೆ ಬುನಾದಿ

ಧಾರವಾಡ, 11- ವಿವಿಧ ಭಾಷೆ, ಧರ್ಮ ಸಂಸ್ಕೃತಿಗಳನ್ನು ಹೊಂದಿರುವ ಭಾರತ ದೇಶದಲ್ಲಿ ಏಕತೆಯನ್ನು ಉಳಿಸಿ, ಬೆಳೆಸಿ ರಾಷ್ಟ್ರ ಐಕ್ಯತೆ ಕಾಪಾಡಲು ಎನ್.ಎಸ್.ಎಸ್. ಭದ್ರ ಬುನಾದಿಯಾಗಿದೆ ಎಂದು ಧಾರವಾಡ ಜಿಲ್ಲಾ ಅಧಿಕಾರಿಗಳ ಕಾರ್ಯಾಲಯದ ಕೇಂದ್ರ ಸ್ಥಾನಿಕ ಅಧಿಕಾರಿಗಳಾದ ಭೀಮಸೇನ ರಾವ್ ಶಿಂಧೆ ಇಲ್ಲಿ ಹೇಳಿದರು.

ಕರ್ನಾಟಕ ವಿಶ್ವ ವಿದ್ಯಾಲಯದ ಸ್ನಾತಕೋತ್ತರ ವಿಭಾಗಗಳ ಎನ್.ಎಸ್.ಎಸ್. ಘಟಕ ಏರ್ಪಡಿಸಿದ್ದ ಎನ್.ಎಸ್.ಎಸ್. ದಿನಾಚರಣೆ ಹಾಗೂ ರಾಷ್ಟ್ರೀಯ ಭಾವೈಕ್ಯತೆಯಲ್ಲಿ ಎನ್.ಎಸ್.ಎಸ್. ಸ್ವಯಂ ಸೇವಕರ ಪಾತ್ರ ಎಂಬ ವಿಚಾರ ಸಂಕಿರಣ ಉದ್ಘಾಟಿಸಿ ಮಾತನಾಡುತ್ತಿದ್ದರು.

ಬೇರೆ ರಾಷ್ಟ್ರಗಳಲ್ಲಿ ವರ್ಗ ಕಲಹವಿದ್ದರೆ ನಮ್ಮಲ್ಲಿ ಧರ್ಮ, ಜಾತಿ ಕಲಹಗಳು ಹೆಚ್ಚುತ್ತಿವೆ. ಪರಸ್ಪರ ತಿಳುವಳಿಕೆ, ಸಾಮರಸ್ಯಗಳನ್ನು ಸಮಾಜದಲ್ಲಿ ಮೂಡಿಸುವಲ್ಲಿ ಎನ್.ಎಸ್.ಎಸ್. ಸ್ವಯಂ ಸೇವಕರ ಪಾತ್ರ ಮಹತ್ವ ಪಡೆಯುತ್ತದೆ ಎಂದು ತಿಳಿಸಿದರು.

ವಿಚಾರ ಸಂಕಿರಣದ ಅಧ್ಯಕ್ಷತೆಯನ್ನು ಭೌತಶಾಸ್ತ್ರ ಪ್ರಾಧ್ಯಾಪಕರಾದ ಡಾ.ಎಸ್.ಆರ್. ತೋಂಟದಾರ್ಯ ಮಾತನಾಡಿ ರಾಷ್ಟ್ರೀಯ ಸೇವಾ ಯೋಜನೆಯ ಸ್ವಯಂ ಸೇವಕರು ದೇಶ ನಿರ್ಮಾಣದಲ್ಲಿ ತೊಡಗಬೇಕು ಎಂದರು.

ವಿಚಾರ ಸಂಕಿರಣದಲ್ಲಿ ಮೋಹನ ಸಿದ್ಧಾಂತಿ, ರಾಜ್ಯ ಇಪ್ಟಾ ಸಂಚಾಲಕ ಡಾ. ಸಿದ್ದನಗೌಡ ಪಾಟೀಲ ಮಾತನಾಡಿದರು. ಸ್ವಯಂ ಸೇವಕಿ ಕವಿತಾ ಕುಸುಗಲ್ ಕು. ಸ್ಮಿತಾ ಕುಲಕರ್ಣಿ ಮಾತನಾಡಿದರು.

ಸಮಾರಂಭದಲ್ಲಿ 1997-98ನೇ ಸಾಲಿನ ರಾಷ್ಟ್ರೀಯ ಇಂದಿರಾ ಗಾಂಧಿ ಎನ್.ಎಸ್.ಎಸ್. ಪ್ರಶಸ್ತಿ ವಿಜೇತ ಕ.ವಿ.ವಿ. ಪಿ.ಜಿ. ಘಟಕದ ಸ್ವಯಂ ಸೇವಕ ಕು. ಸಂತೋಷ ಹಾನಗಲ್ ಅವರನ್ನು ಸನ್ಮಾನಿಸಲಾಯಿತು.

ಸುಭಾಷ ಹಾನಗಲ್ ಅವರೂ ಮಾತನಾಡಿದರು. ಪಿ.ಜಿ. ಎನ್.ಎಸ್.ಎಸ್. ಘಟಕದ ಕಾರ್ಯಕ್ರಮ ಅಧಿಕಾರಿಗಳಾದ ಪ್ರೊ. ಈಶ್ವರ ಬಸವರಡ್ಡಿ ಸ್ವಾಗತಿಸಿದರು. ಎನ್.ಟಿ. ನಾಯ್ಕ ವಂದಿಸಿದರು. ಸುರೇಶ ಎಂ. ಮಡಿವಾಳ ಕಾರ್ಯಕ್ರಮ ನಿರೂಪಿಸಿದರು.

**ವಾಣಿಜ್ಯ ಸಂಘದ ಉದ್ಘಾಟನೆ:** ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ವಾಣಿಜ್ಯ ವಿಭಾಗದ 'ವಾಣಿಜ್ಯ ಸಂಘ'ದ ಕಾರ್ಯ ಚಟುವಟಿಕೆಯನ್ನು ಅಮೆರಿಕಾ ಮಾರ್ಶಲ್ ವಿಶ್ವವಿದ್ಯಾಲಯದ ವಾಣಿಜ್ಯ ಶಾಲೆಯ ನಿರ್ದೇಶಕ ಡಾ. ಆರ್.ಜಿ. ಅಕ್ಕಿವಾಳ ಉದ್ಘಾಟಿಸಿದರು. ಅಮೆರಿಕಾದಲ್ಲಿ ಭಾರತೀಯರ ಸ್ಥಿತಿಗತಿ ಸಾಮಾಜಿಕ ಜೀವನ ಉತ್ತಮವಾಗಿದೆ ಎಂದು ತಿಳಿಸಿದರು. ನಿವೃತ್ತ ಪ್ರಾಧ್ಯಾಪಕ ಡಾ. ಬಿ.ಎಂ. ವಾಲಿ, ವಿಭಾಗದ ಮುಖ್ಯಸ್ಥರಾದ ಡಾ. ಎಸ್.ಎಸ್. ಹೂಗಾರ ಅಧ್ಯಕ್ಷತೆ ವಹಿಸಿದ್ದರು. ಮಹಾಂತೇಶ ಜಕಾತಿ ಸ್ವಾಗತಿಸಿದರು.ಡಾ. ಎಂ.ಆರ್. ಸೊಲ್ಲಾಪುರ ಅತಿಥಿಗಳನ್ನು ಪರಿಚಯಿಸಿದರು. ಆರ್.ಜಿ. ಗಡಾದ ವಂದಿಸಿದರು. ಅಜಯ ಅಜ್ಜಪ್ಪನವರ ಕಾರ್ಯಕ್ರಮ ನಿರೂಪಿಸಿದರು.

## ಸಮುದಾಯ ಭವನಕ್ಕೆ ಭೂಮಿ ಪೂಜೆ

ಹುಬ್ಬಳ್ಳಿ, 11- ಇಲ್ಲಿಯ ಕುಸುಗಲ್ಲ ರಸ್ತೆಯ ಪಕ್ಕದ ಜನತಾ ಕಾಲನಿ ಸರ್ವೆ ನಂಬರ 70 ಎ. ಪ್ರದೇಶದಲ್ಲಿ ಅಗತ್ಯ ಯೋಜನೆಗಳ ಪೂರೈಕೆಗಾಗಿ ಸಂಸದರ ನಿಧಿಯಿಂದ 7 ಲಕ್ಷ ರೂ.ಗಳ ವೆಚ್ಚದ ಸಮುದಾಯ ಭವನದ ಭೂಮಿ ಪೂಜೆ ಇತ್ತೀಚೆಗೆ ನಡೆಯಿತು. ವಿಧಾನ ಸಭೆಯ ಪ್ರತಿಪಕ್ಷದ ನಾಯಕ ಜಗದೀಶ ಶೆಟ್ಟರ, ಹುಧಾ ಮಹಾನಗರ ಜಿಲ್ಲಾ ಬಿಜೆಪಿ ಅಧ್ಯಕ್ಷ ಪ್ರಹ್ಲಾದ ಜೋಶಿ, ಉದ್ಯಮಿ ರಮೇಶ ಶೆಟ್ಟಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ಡಾ. ಬಾಬಾಸಾಹೇಬ ಅಂಬೇಡ್ಕರ ಯುವಕ ಮಂಡಳದ ಕಾರ್ಯದರ್ಶಿ ಪ್ರಹ್ಲಾದ ಮಡಿವಾಳರ ಸಮುದಾಯ ಭವನ ನಿರ್ಮಾಣ ಕಾರ್ಯವನ್ನು ಬೇಗನೆ ಪೂರ್ತಿಗೊಳಿಸಬೇಕೆಂದು ಸಂಬಂಧಪಟ್ಟ ಅಧಿಕಾರಿಗಳಿಗೆ ಮನವಿಮಾಡಿಕೊಂಡರು. ಲಕ್ಷ್ಮಣ ಕೋರಪಾಟಿ ಮಾಲಾರ್ಪಣೆ ಮಾಡಿದರು. ಮೇರುಘ ದೇವಯ್ಯ, ನೇಮುಲಯ್ಯ, ಪ್ರಭಾಕರ ಕೋರಪಾಟಿ, ದಾರು ಮರಿಯಾದಾಸ, ರಮೇಶ ಕೋಟೇಶ್ವರರಾವ್, ಕೆ. ಕಾಶಿಯ್ಯ, ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

## ಸತತಾಭ್ಯಾಸ ಸಾಧನೆಯ ದಾರಿ

ಹುಬ್ಬಳ್ಳಿ, 11- ವಿದ್ಯಾರ್ಥಿಗಳಲ್ಲಿ ಅಧ್ಯಯನ ಶೀಲತೆ, ಅತ್ಯವಶ್ಯ ಕಲೆ, ಕ್ರೀಡೆ ಮುಂತಾದವುಗಳನ್ನು ಸತತಾಭ್ಯಾಸದಿಂದ ರೂಢಿಸಿಕೊಳ್ಳಲು ಸಾಧ್ಯ ಎಂದು ಸಾಹಿತಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ ಹೇಳಿದರು.

ಕೆ.ಎಲ್.ಇ. ಸಂಸ್ಥೆಯ ಶ್ರೀ ಕಾಡಸಿದ್ಧೇಶ್ವರ ಕಲಾ ಮಹಾವಿದ್ಯಾಲಯ ಹಾಗೂ ಎಚ್.ಎಸ್. ಕೋತಂಬ್ರಿ ವಿಜ್ಞಾನ ಸಂಸ್ಥೆಯ ಪ್ರಸಕ್ತ ವರ್ಷದ ಸಾಂಸ್ಕೃತಿಕ ಮತ್ತು ಕ್ರೀಡಾ ಚಟುವಟಿಕೆಗಳನ್ನು ಉದ್ಘಾಟಿಸಿ ಇತ್ತೀಚೆಗೆ ಮಾತನಾಡಿದರು.

ವಿದ್ಯಾರ್ಥಿಗಳು ಸಾಹಿತ್ಯ ಗೋಷ್ಠಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದಲ್ಲದೇ ಕ್ರೀಡೆಗಳಲ್ಲಿಯೂ ಸೋಲು ಗೆಲುವುಗಳನ್ನು ಎದುರಿಸಿ ಅನುಭವ ಪಡೆಯುವಂತೆ ಅವರು ಸಲಹೆ ನೀಡಿದರು.

ಪ್ರಾಚಾರ್ಯ ಬಿ.ಎಸ್.ಎಸ್. ರಾವ್ ಸ್ವಾಗತಿಸಿದರು. ವಿದ್ಯಾರ್ಥಿ ಸಂಘದ ಉಪಾಧ್ಯಕ್ಷ ಪ್ರೊ. ಎಂ.ವಿ. ಗಡಾದ ಪರಿಚಯಿಸಿದರು. ಪ್ರೊ. ಎಸ್.ಪಿ. ಬೊಮ್ಮಣ್ಣವರ ಸಂದೇಶ ಓದಿದರು. ಕೆ.ಎಲ್.ಇ. ಸಂಸ್ಥೆಯ ಆಡಳಿತ ಮಂಡಳಿಯ ಸದಸ್ಯ ಪ್ರೊ. ವಿ.ಬಿ. ಹಿರೇಮಠ ಅತಿಥಿಳಗಳಿಗೆ ನೆನಪಿನ ಕಾಣಿಕೆ ಅರ್ಪಿಸಿದರು.

ಇದೇ ಸಂದರ್ಭದಲ್ಲಿ ಮಹಾವಿದ್ಯಾಲಯದ ವಾರ್ಷಿಕ ಪತ್ರಿಕೆ "ಅರಿವು" ಗ್ರಂಥವನ್ನು ಡಾ. ಪಟ್ಟಣಶೆಟ್ಟಿ ಬಿಡುಗಡೆಗೊಳಿಸಿ ವಾರ್ಷಿಕ ಪರೀಕ್ಷೆಗಳಲ್ಲಿ ಪ್ರಥಮ, ದ್ವಿತೀಯ ಸ್ಥಾನಗಳಿಸಿದ ವಿದ್ಯಾರ್ಥಿಗಳಿಗೆ ಬಹುಮಾನ ವಿತರಣೆ ಮಾಡಿದರು. ವಿದ್ಯಾರ್ಥಿ ಒಕ್ಕೂಟದ ಕಾರ್ಯದರ್ಶಿ ಭಾಸ್ಕರ ದೇಶಪಾಂಡೆ ವಂದಿಸಿದರು. ವಿದ್ಯಾರ್ಥಿ ಒಕ್ಕೂಟದ ಕಾರ್ಯಾಧ್ಯಕ್ಷ ಪ್ರೊ. ಎಸ್.ಎಸ್. ನವಲಗುಂದ ಕಾರ್ಯಕ್ರಮ ನಿರ್ವಹಿಸಿದರು.

## 'ಭೂಗ್ರಹ' ವಿಶೇಷ ಚರ್ಚೆ

ಹುಬ್ಬಳ್ಳಿ, 11- ಸ್ಥಳೀಯ ಶ್ರೀ ಶಾಂತಿನಾಥ ಹಿಂದಿ ಹೈಸ್ಕೂಲ್‌ನಲ್ಲಿ ಜಯ ವಿಜ್ಞಾನ ಸಂಘವು 'ಭೂಗ್ರಹ' ವಿಷಯವನ್ನಾಧರಿಸಿ ವಿಭಿನ್ನ ಚಟುವಟಿಕೆಗಳ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು.

ಭೂಮಿಯ ಜನ್ಮ ಭೂ ದ್ರವ್ಯಗಳ ವಿಭಾಗೀಕರಣ, ಭೂ ಖಂಡಗಳ ಸ್ಥಳಾಂತರ, ನೈಸರ್ಗಿಕ ಸಂಪನ್ಮೂಲಗಳು, ವಾಯು ಮಂಡಲ, ಭೂಕಂಪನ, ಜ್ವಾಲಾಮುಖಿ, ಭೂಕೇಂದ್ರವಾದ, ಸೌರಕೇಂದ್ರ ಸಿದ್ಧಾಂತ, ಭೂಗ್ರಹದ ಆಕಾರ ಹಾಗೂ ಗ್ರಹಣಗಳು ಎಂಬ ವಿಷಯಗಳ ಮೇಲೆ ವಿದ್ಯಾರ್ಥಿಗಳು ವ್ಯಾಖ್ಯಾನ ನೀಡಿದರು.

'ಮಾಡೆಲ್ ತಯಾರಿಸೋಣ ಬನ್ನಿ' ಎಂಬ ಹಂತದಲ್ಲಿ ಕುಮಾರ ಮಣಿಲ ಜೈನ 'ಸೂಜೀರಂಧ್ರ ಬಿಂಬ ಗ್ರಾಹಕ'ವನ್ನು ಪ್ರದರ್ಶಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ನೆಹರು ವಿಜ್ಞಾನ ಮಹಾವಿದ್ಯಾಲಯದ ಡಾ.ಸರದಾರ ಹುಸೇನ ಮಾತನಾಡಿ ಭಾರತೀಯರು ವಿಜ್ಞಾನ ಮನೋಭಾವನೆಯುಳ್ಳವರು, ಭಾರತೀಯ ಸಂಸ್ಕೃತಿ ಹಾಗೂ ಹಬ್ಬಗಳ ಆಚರಣೆಯಲ್ಲಿ ವಿಜ್ಞಾನ ಅಡಗಿದೆ ಎಂದರು.

ಪ್ರಾಚಾರ್ಯ ಡಾ.ಪಾರಸಮಲ್ ಜೈನ ಅಧ್ಯಕ್ಷತೆ ವಹಿಸಿದ್ದರು. ಜಯ ವಿಜ್ಞಾನ ಸಂಘದ ಪ್ರಕಾಶ ಸುರೇಗಾಂವಕರ ಕಾರ್ಯಕ್ರಮ ಸಂಯೋಜಿಸಿದ್ದರು. ಜಿ.ಎಸ್. ಮುತ್ತಲಗೇರಿ ವಂದಿಸಿದರು.

ನಗರದ ಶ್ರೀ ಶಾಂತಿನಾಥ ಹಿಂದಿ ಹೈಸ್ಕೂಲ್‌ನಲ್ಲಿ ಜಯ ವಿಜ್ಞಾನ ಸಂಘ 'ಭೂಗ್ರಹ' ವಿಷಯ ಆಧರಿಸಿ ಏರ್ಪಡಿಸಿದ್ದ ವಿಭಿನ್ನ ಚಟುವಟಿಕೆಗಳ ಕಾರ್ಯಕ್ರಮದಲ್ಲಿ ಪ್ರಕಾಶ ಸುರೇಗಾಂವಕರ ಮಾತನಾಡಿದರು. ಚಿತ್ರದಲ್ಲಿ ಜಿ.ಎಸ್. ಮುತ್ತಲಗೇರಿ. ಎಸ್.ಪಿ. ನಾಯ್ಡು, ಡಾ.ಪಾರಸಮಲ್ ಜೈನ. ಡಾ.ಸರದಾರ ಹುಸೇನ್. ಎನ್.ಕೆ. ಕುಲಕರ್ಣಿ. ಶ್ರೀಮತಿ ಎಸ್.ಎಸ್. ಹಿರೇಮಠ ಇದ್ದಾರೆ.

**ಸತ್ಕಾರ:** ಸ್ಥಳೀಯ ಗಣೇಶ ಪೇಟೆಯಲ್ಲಿ ಸಹರಾ ಎಜ್ಯುಕೇಷನ್ ವೆಲ್‌ಫೇರ್ ಕಲ್ಚರ್ ಮತ್ತು ಸೋಸಿಯಲ್ ಸೊಸಾಯಿಟಿಯು ಅಂಜುಮನ್ ಇಸ್ಲಾಂ ಸಂಸ್ಥೆಗೆ ನೂತನವಾಗಿ ಆಯ್ಕೆಯಾದ ಪದಾಧಿಕಾರಿಗಳಿಗೆ ಸತ್ಕಾರ ಸಮಾರಂಭ ಏರ್ಪಡಿಸಿತ್ತು.

ಶಾಸಕ ಹಾಗೂ ಅಂಜುಮನ್ ಸಂಸ್ಥೆಯ ಮಾಜಿ ಅಧ್ಯಕ್ಷ ಇಸ್ಮಾಯಿಲ್ ಕಾಲೇಬುಡ್ಡೆ ಅಧ್ಯಕ್ಷತೆ ವಹಿಸಿದ್ದರು. ನೂತನ ಅಧ್ಯಕ್ಷ ಹಾಗೂ ಶಾಸಕ ಜಬ್ಬಾರಖಾನ ಹೊನ್ನಳ್ಳಿ, ಉಪಾಧ್ಯಕ್ಷ ಎಂ.ಆರ್. ಮುಲ್ಲಾ, ಕಾರ್ಯದರ್ಶಿ ಇಸೂಫ್ ಸವಣೂರ, ಜಂಟಿ ಕಾರ್ಯದರ್ಶಿ ಅನ್ವರ ಮುಧೋಳ ಹಾಗೂ ಸದಸ್ಯರನ್ನು ಸೊಸಾಯಿಟಿ ಅಧ್ಯಕ್ಷ ಉಪಾಧ್ಯಕ್ಷರು ಸತ್ಕರಿಸಿದರು.

ಕಾಲೇಬುಡ್ಡೆ, ಹೊನ್ನಳ್ಳಿ, ಸವಣೂರ ಹಾಗೂ ಧಾರವಾಡಕರ ಅವರುಗಳು ಸಭೆಯನ್ನುದ್ದೇಶಿಸಿ ಮಾತನಾಡಿದರು. ಮಹಮದ್ ಹನೀಫ್ ಚೌಧರಿ ಸ್ವಾಗತಿಸಿದರು. ಮಹಮದ್ ರಫೀಕ ಸಾಲಬಂದ ವಂದಿಸಿದರು.

ಧಾರವಾಡದ ಶ್ರೀ ಹರಳಯ್ಯ ಚರ್ಮೋದ್ಯೋಗಿಗಳ ಸಂಘದ ಅಧ್ಯಕ್ಷ ರಾಜು ಬೆಳಗಾವಿ ಅವರು ಮೃತರಾದ ಉದ್ಯೋಗಿಗಳ ಕುಟುಂಬದ ಸದಸ್ಯರಿಗೆ ಪರಿಹಾರಧನ ಈಚೆಗೆ ವಿತರಿಸಿದರು.

## ಪರಿಹಾರಧನ ವಿತರಣೆ

ಧಾರವಾಡ, 11- ಇಲ್ಲಿಯ ಶ್ರೀ ಹರಳಯ್ಯ ಚರ್ಮೋದ್ಯೋಗಿಗಳ ಸಂಘದ ಆಶ್ರಯದಲ್ಲಿ ಕೆಲಸ ಮಾಡುತ್ತಿದ್ದ ಹಾಗೂ ಇತ್ತೀಚೆಗೆ ನಿಧನರಾದವರ ಕುಟುಂಬಗಳಿಗೆ ಪರಿಹಾರವನ್ನು ಇಲ್ಲಿ ವಿತರಿಸಲಾಯಿತು.

ಭಾರತೀಯ ಜೀವ ವಿಮಾ ನಿಗಮದ ಸಾಮೂಹಿಕ ಭದ್ರತಾ ಯೋಜನೆಯಡಿ ಶ್ರೀಮತಿ ನಿಂಗಮ್ಮ ಬೋಗಿ ಮತ್ತು ಶ್ರೀಮತಿ ಪಾರ್ವತವ್ವ ಚಿಟಗುಪ್ಪಿ ಅವರು ತಲಾ ಐದು ಸಾವಿರ ರೂ. ನೆರವನ್ನು ಪಡೆದರು.

ಸಂಘದ ಅಧ್ಯಕ್ಷ ರಾಜು ಬೆಳಗಾವಿ, ಕಾರ್ಯದರ್ಶಿ ಧ್ರುವ ಗಾಮನಗಟ್ಟಿ ಅವರು ಈಚೆಗೆ ವಿಮಾ ನಿಗಮದ ಸೌಲಭ್ಯದ ಧನ ವಿತರಿಸಿದರು.

## ಕನಕೂರಿನಲ್ಲಿ ಉಚಿತ ಆರೋಗ್ಯ ತಪಾಸಣೆ

ಧಾರವಾಡ, 11- ಡಾ. ಬಿ.ಡಿ. ಜತ್ತಿ ಹೋಮಿಯೋಪಥಿಕ್ ಮೆಡಿಕಲ್ ಕಾಲೇಜ ಮತ್ತು ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಶಾಖೆಗಳ ಸಂಯುಕ್ತಾಶ್ರಯದಲ್ಲಿ ಕನಕೂರ ಗ್ರಾಮದಲ್ಲಿ ಗಾಂಧೀ ಜಯಂತಿ ಅಂಗವಾಗಿ ಉಚಿತ ಆರೋಗ್ಯ ತಪಾಸಣೆ ಶಿಬಿರ ಜರುಗಿತು. ಗ್ರಾ.ಪಂ. ಅಧ್ಯಕ್ಷೆ ಅನಸೂಯಾ ಮಾದರ ಗಾಂಧೀಜಿ ಭಾವಚಿತ್ರಕ್ಕೆ ಪೂಜೆ ಸಲ್ಲಿಸುವ ಮೂಲಕ ಶಿಬಿರವನ್ನು ಉದ್ಘಾಟಿಸಿದರು.

ನಿವೃತ್ತ ಸರ್ಜನ್ ಡಾ. ವಿ.ಡಿ. ಕರ್ಪೂರಮಠ ಅವರು ಮಾತನಾಡಿ ಆರೋಗ್ಯ ಶಿಬಿರಗಳ ಲಾಭ ಪಡೆದು ಕೊಳ್ಳಬೇಕೆಂದು ತಿಳಿಸಿದರು. ವಿ.ಎಸ್. ಗಂಗಾಧರಮಠ ಅವರು ಮಾತನಾಡಿ, ಬಡವರ ಸೇವೆಯೊಂದಿಗೆ ಗಾಂಧಿ ಜಯಂತಿ ಆಚರಿಸುವದು ಸಾರ್ಥಕವಾಗಿದೆ ಎಂದರು. ಸಭೆಯಲ್ಲಿ ಅರ್ಜುನರಾವ್ ಪವಾರ, ಮಲ್ಲಪ್ಪ ಅಚಮಟ್ಟಿ, ಬಸವಂತರಾವ ಪವಾರ, ತಿಪ್ಪಣ್ಣ ಜಾಧವ, ಮಂದಾಕಿನಿ ನವಲಗುಂದ ಉಪಸ್ಥಿತರಿದ್ದರು.

ಡಾ. ಶಿರಕೋಳ, ಡಾ.ಗಿರಡ್ಡಿ, ಡಾ.ಮಾಧುರಿ, ಡಾ. ಲೀಲಾ ಪಟೇಲ್, ಡಾ, ಮೀರಾ, ಡಾ. ನಂದಿಮಠ, ಡಾ.ಹಳ್ಳಿಕೇರಿ, ಡಾ. ಗಡ್ಡಿ, ಡಾ.ಸ್ವಾಮಿ ಅವರು ಆರೋಗ್ಯ ತಪಾಸಣೆ ನಡೆಸಿ ತಿಳುವಳಿಕೆ ನೀಡಿದರು. ಶ್ರೀಮತಿ ಕುಲಕರ್ಣಿ ಹಂಪಣ್ಣವರ, ಮತ್ತು ಮುದಗಲ್ ಅವರು ಭಾಗವಹಿಸಿದ್ದರು.

ಮಹಾತ್ಮಾ ಗಾಂಧಿ ಜಯಂತಿಯಂಗವಾಗಿ ಧಾರವಾಡ ಸಮೀಪದ ಕನಕೂರದಲ್ಲಿ ನಡೆದ ಉಚಿತ ಆರೋಗ್ಯ ಶಿಬಿರವನ್ನು ಶ್ರೀಮತಿ ಅನಸೂಯಾ ಮಾದರ ಉದ್ಘಾಟಿಸಿದರು. ಡಾ. ಅಬ್ಬಿಗೇರಿಮಠ, ಡಾ. ವಿ.ಡಿ. ಕರ್ಪೂರಮಠ, ಶ್ರೀ ಸಂತ ಅರ್ಜುನ, ವಿ.ಎಸ್. ಗಂಗಾಧರಮಠ ಚಿತ್ರದಲ್ಲಿದ್ದಾರೆ.

## ಹೆಬ್ಬಳ್ಳಿ ಶಾಲಾ ಬಾಲಕ ರಾಜ್ಯಮಟ್ಟದ ಕ್ರೀಡಾ ಸ್ಪರ್ಧೆಗೆ

ಧಾರವಾಡ, 11- ಹೆಬ್ಬಳ್ಳಿ ಸರಕಾರಿ ಮಾದರಿ ಶಾಲೆಯ ಐದನೇಯ ವರ್ಗದ ವಿದ್ಯಾರ್ಥಿ ಮೌಲಾಸಾಬ ಕೊಣ್ಣೂರ ಈತನು ಇತ್ತೀಚೆಗೆ ಧಾರವಾಡದಲ್ಲಿ ನಡೆದ ಧಾರವಾಡ ಜಿಲ್ಲಾ ಪ್ರಾಥಮಿಕ ಶಾಲಾ ಮಟ್ಟದ ಕ್ರೀಡಾ ಕೂಟದಲ್ಲಿ ಭಾಗವಹಿಸಿ 90 ಮೀ. ಅಡೆತಡೆ (ಹರ್ಡಲ್ಸ್) ಓಟದಲ್ಲಿ ದ್ವಿತೀಯ ಸ್ಥಾನ ಪಡೆದು ರಾಜ್ಯ ಮಟ್ಟದ ಕ್ರೀಡಾ ಸ್ಪರ್ಧೆಗೆ ಆಯ್ಕೆಯಾಗಿದ್ದಾನೆ.

ಪ್ರತಿಭಾ ಪುರಸ್ಕಾರ ಪ್ರಶಸ್ತಿ ಹೆಬ್ಬಳ್ಳಿ ಸರಕಾರಿ ಮಾದರಿ ಶಾಲೆ 6ನೇ ವರ್ಗದ ವಿದ್ಯಾರ್ಥಿ ಮೊನ್ನಪ್ಪ ಕ. ಲಕ್ಕಮ್ಮನವರ ಈತನು ಭಾರತ ಸೇವಾದಳದ ಧಾರವಾಡ ತಾಲೂಕಾ ಪ್ರತಿಭಾ ಪುರಸ್ಕಾರ ಪ್ರಶಸ್ತಿ ಪಡೆದು ಸೆಪ್ಟೆಂಬರ್ 16ರಿಂದ 20ರ ವರೆಗೆ ಧಾರವಾಡ ತಾಲೂಕಾ ಮುಗಳಿ ಗ್ರಾಮದಲ್ಲಿ ನಡೆದ ಅಖಂಡ ಜಿಲ್ಲಾ ನಾಯಕತ್ವ ಹಾಗೂ ಪ್ರತಿಭಾ ಪುರಸ್ಕಾರದ ಜಿಲ್ಲಾ ಮಟ್ಟದ ಶಿಬಿರದಲ್ಲಿ ತರಬೇತಿ ಪಡೆದು ಯಶಸ್ವಿಯಾಗಿದ್ದಾನೆ. ಶಾಲೆಯ ಪ್ರಧಾನ ಗುರುಗಳು ಹಾಗೂ ಶಿಕ್ಷಕರು ಇವರಿಗೆ ಅಭಿನಂದಿಸಿದ್ದಾರೆ.

## ನಿರ್ಮಲೀಕರಣಕ್ಕೆ ಸಹಕಾರದ ಆಶಯ

ಹುಬ್ಬಳ್ಳಿ, 11- ನಗರದ ನಿರ್ಮಲೀಕರಣಕ್ಕೆ ವೈದ್ಯರ ಸಹಕಾರ ಸದಾ ಇರಲಿ ಎಂದು ಹುಬ್ಬಳ್ಳಿ ಧಾರವಾಡ ಮಹಾನಗರ ಪಾಲಿಕೆ ಆರೋಗ್ಯಾಧಿಕಾರಿ ಡಾ. ಶ್ರೀಮತಿ ಹೀರು ರಾಯ್ಕರ ಆಶಿಸಿದ್ದಾರೆ.

ನೀಮಾ-ಸಿ.ಎಂ.ಈ-2000 ಕಾರ್ಯಕ್ರಮದಲ್ಲಿ ಮಾತನಾಡಿದ ಅವರು ಸ್ವಚ್ಛತಾ ಕಾರ್ಯಕ್ರಮಕ್ಕೆ ಪಾಲಿಕೆ ಆದ್ಯತೆ ನೀಡಿದೆ ಎಂದರು. ಡಾ. ಸಿ.ಬಿ. ಹಿಪ್ಪರಗಿ ಅಧ್ಯಕ್ಷತೆ ವಹಿಸಿದ್ದರು. ಡಾ. ಆರ್.ಎನ್. ಜೋಶಿ ಅತಿಥಿಗಳಾಗಿದ್ದರು. ಡಾ. ಸುವರ್ಣಾ ಮತ್ತು ಡಾ. ಜ್ಯೋತಿ ಆರಂಭದಲ್ಲಿ ಶ್ರೀ ಧನ್ವಂತರಿ ಸ್ತವನ ಹಾಡಿದರು. ಜಿಲ್ಲಾ ಘಟಕ ಕಾರ್ಯದರ್ಶಿ ಡಾ. ಗುರುನಾಥ ಕಂಠಿ ಸ್ವಾಗತಿಸಿದರು. ಡಾ. ರಾಮದಾಸ ಉಪಾಧ್ಯಾಯ ವಂದಿಸಿದರು. ಡಾ. ಎಂ.ಎ. ಹುಲ್ಲೂರ ಕಾರ್ಯಕ್ರಮ ನಿರೂಪಿಸಿದರು. ವೈದ್ಯರಾದ ಬಿ. ವಿದ್ಯಾಸಾಗರ, ಮಾಧವ ಡಿಗ್ಗಾವಿ, ಉಮೇಶ ಬೀಳಗಿ, ಆರ್. ಶ್ರೀಪತಿ ಉಪನ್ಯಾಸ ನೀಡಿದರು.

**ಜಾಥಾ:** ಆಯುರ್ವೇದ ಮಹಾವಿದ್ಯಾಲಯ, ಕಾಡಸಿದ್ಧೇಶ್ವರ ಕಾಲೇಜು, ಪಿ.ಸಿ. ಜಾಬಿನ್ ಕಾಲೇಜು, ಸೆಕ್ರೆ ಲಾ ಕಾಲೇಜುಗಳ ರಾಷ್ಟ್ರೀಯ ಸೇವಾ ಯೋಜನೆಗಳ ಸಂಯುಕ್ತ ಆಶ್ರಯದಲ್ಲಿ ಸ್ವಯಂ ಸೇವಕರ ಭಾವೈಕ್ಯತಾ ಜಾಥಾ ಇತ್ತೀಚೆಗೆ ಜರುಗಿತು. ಆಯುರ್ವೇದ ಕಾಲೇಜ ಪ್ರಾಚಾರ್ಯ ಡಾ. ಎಸ್.ಬಿ. ಹಿರೇಮಠ ಜಾಥಾ ಉದ್ಘಾಟಿಸಿದರು.

ಆಯುರ್ವೇದ ಕಾಲೇಜಿನಲ್ಲಿ ನಡೆದ ಸಮಾರಂಭದ ಅಧ್ಯಕ್ಷತೆಯನ್ನು ಹಿರೇಮಠ ವಹಿಸಿದ್ದರು. ಡಾ. ಜಿ.ಎಚ್. ನರೇಗಲ್ ಮೋಹನ ಲಿಂಬಿಕಾಯಿ ಮುಖ್ಯ ಅತಿಥಿಗಳಾಗಿದ್ದರು. ಪ್ರೊ. ಕೆ.ಎಸ್. ಕೌಜಲಗಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಸಂದೀಪ ಹಾಗೂ ರೀನಾ ಪ್ರಾರ್ಥನೆ ಹಾಡಿದರು. ರಾಮು ಮೂಲಗಿ ಹಾಗೂ ಮುತ್ತು ವಾಲಿ ಜಾನಪದ ಗೀತೆ ಹಾಡಿದರು. ಡಾ. ಆರ್. ಮೋಹನರಾಜ ವಂದಿಸಿದರು. ಚಿಂತಾಮಣಿ ಎಂ. ಜೋಶಿ, ಸಂಜಯ ಕಾರ್ಯಕ್ರಮ ನಿರೂಪಿಸಿದರು.

**ಸತ್ಕಾರ:** ರೋಟರಿ ಕ್ಲಬ್ ಪೂರ್ವ ಆಶ್ರಯದಲ್ಲಿ ಇತ್ತೀಚೆಗೆ ರಾಜ್ಯ ಪ್ರಶಸ್ತಿ ವಿಜೇತ ಶಿಕ್ಷಕ ಕೆ.ಎ. ದೊಡ್ಡಮನಿ ಹಾಗೂ ಇನ್ನೋರ್ವ ಶಿಕ್ಷಕ ಎ.ವಿ. ಕಮ್ಮಾರ ಅವರನ್ನು ಸತ್ಕರಿಸಲಾಯಿತು. ಸಿ.ಬಿ. ಪಾಟೀಲ ಅಧ್ಯಕ್ಷತೆ ವಹಿಸಿದ್ದರು. ಮಾಜಿ ಅಧ್ಯಕ್ಷ ಬಿ.ಜೆ. ಡಿಸೋಜಾ ಹಾಗೂ ಕೆ.ಆರ್. ನಲವಡಿ ಉಪಸ್ಥಿತರಿದ್ದರು.

**ಶಿಕ್ಷಕರ ದಿನಾಚರಣೆ:** ಕಾರವಾರ ರಸ್ತೆಯ ಬಾಸೆಲ್ ಮಿಷನ್ ಇಂಗ್ಲೀಷ್ ಮಾಧ್ಯಮ ಶಾಲೆಯಲ್ಲಿ ಇತ್ತೀಚೆಗೆ ಶಿಕ್ಷಕ ದಿನ ಆಚರಿಸಲಾಯಿತು. ಶಿಕ್ಷಣ ಸಂಸ್ಥೆ ಅಧ್ಯಕ್ಷ ರೈಟ್ ರೆವರೆಂಡ್ ಡಾ. ಪಿ.ಜಿ.ಕೆ. ಬಲ್ಲಿ ಅಧ್ಯಕ್ಷತೆ ವಹಿಸಿದ್ದರು. ಶಾಸಕ ಬಸವರಾಜ ಹೊರಟ್ಟಿ, ಕ್ಷೇತ್ರ ಶಿಕ್ಷಣಾಧಿಕಾರಿ ಆರ್.ಸಿ. ಹುಲಗತ್ತಿ, ಅತಿಥಿಗಳಾಗಿದ್ದರು. ಪ್ರೌಢಶಾಲೆ ಮುಖ್ಯಾಧ್ಯಾಪಕ ಬಿ.ಬಿ. ಗುಡಿಸಲಮನಿ ಸ್ವಾಗತಿಸಿದರು. ಶ್ರೀಮತಿ ಸಲ್ಮಾ ಜೆ. ಭಗ್ಯ ವಂದಿಸಿದರು.

# ಕುಸ್ತಿ ಗಡಿಗಳಿಗೆ ಪ್ರೋತ್ಸಾಹ ನೀಡಿದ ಅಗಡಿ

"ಮಲ್ಲಯುದ್ಧ" ಎಂಬ ಶಬ್ದ ಇಂದಿನ ಜನಾಂಗಕ್ಕೇ ತಕ್ಷಣ ಅರ್ಥವಾಗಲಿಕ್ಕಿಲ್ಲ. ಕುಸ್ತಿಗಳು ಎಂಗಿ ಕುಸ್ತಿಗಳು ಎಂದರೆ ತಿಳಿಯಬಹುದೇನೋ. ಮಲ್ಲಯುದ್ಧ ಆರಮ್ಹಾಲ್ಯವಿದ್ದಾಗ ಅಲ್ಲಿ ಗಂಡುವಿದ್ಯೆ ಶೌರ್ಯಕಲೆ ಎಂದು ಗುರುತಿಸಲಾಗಿದೆ ಪುರಾಣಕಾಲದಿಂದಲೂ ಇದ್ದ ಈ ಕಲೆ ಇತಿಹಾಸ ಕಾಲದಲ್ಲಿ ರಾಜಮಹಾರಾಜರುಗಳಿಂದ ಪೋಷಣೆ ಪಡೆದು ಬೆಳೆದುಬಂದಿತು.

ರಾಜ ಮಹಾರಾಜರ ಪೋಷಣೆ ಈ ವಿದ್ಯೆಗೆ ಕಡಿಮೆಯಾದರೂ ಅದು ನೆಲಕಚ್ಚಲಿಲ್ಲ. ಅಲ್ಲಲ್ಲಿ ಕೆಲ ಉತ್ಸಾಹಿ ತರುಣ ಜನರ ಅಭಿಮಾನದಿಂದ ಉಳಿದುಕೊಂಡಿತು. ಕೆಲವೆಡೆ ಬೆಳೆದು ಬಂತು. ದಾವಣಗೇರಿಯ ರಾಜನಹಳ್ಳಿ ಹನುಮಂತಪ್ಪ, ಹುಬ್ಬಳ್ಳಿಯ ಎಲಿ ಮಾರಾವ ರಾಜಾಸಾಹೇಬ ಇಂಥವರಿಂದ ಈ ಆಟಕ್ಕೆ ಹೋದ ಶತಮಾನದಲ್ಲಿ ಒಂದಿಷ್ಟು ಪ್ರೋತ್ಸಾಹ ದೊರೆಯಿತು. ವರ್ಷಕ್ಕೆ ಒಂದೆರಡು ಸಲ ಈ ಪಂದ್ಯವನ್ನು ಏರ್ಪಡಿಸಿ ಸುತ್ತಲಿನ ಪೈಲ್ವಾನರು ಹಾಗೂ ದೂರದ ಪ್ರಸಿದ್ಧ ಪೈಲ್ವಾನರ ಕುಸ್ತಿಯನ್ನು ಅವರು ಸಂಘಟಿಸುತ್ತಿದ್ದರು.

ಇಂಥ ಸಂದರ್ಭದಲ್ಲಿ ಹಾವೇರಿ ತಾಲೂಕಿನ ಅಗಡಿ ಗ್ರಾಮದ ದೇಸಾಯರು ಮಾಡಿದ ಕಾರ್ಯ ಇತಿಹಾಸ ಪುಟಗಳಲ್ಲಿ ನಮೂದಾಗಬೇಕಾದಂಥ ಮಾತು. ಗ್ರಾಮ ದೇವತೆಯ ಜಾತ್ರೆ, ಭಾರತ ಹುಣ್ಣಿಮೆಯಾಗಿ 9 ದಿನಕ್ಕೆ ನಡೆಯುತ್ತದೆ. ಆ ಜಾತ್ರೆಯಲ್ಲಿ ದೇಸಾಯರು ಮೋಜಿಗಾಗಿ ಬೈಲುಗುಸ್ತಿಯನ್ನು ಪ್ರಾರಂಭಿಸಿದರು. ಬೈಲುಗುಸ್ತಿಯಾದರೂ ಶಿಸ್ತು, ನಿಯಮ, ಕಟ್ಟಳೆಗಳನ್ನು ಪಾಲಿಸಿದರು. ಅಂದರೆ ಕುಸ್ತಿ ಎಂದೂ "ಸಮ" ಆಗುವಂತಿಲ್ಲ, ಯಾರೊಬ್ಬರು ಗೆಲಿಯದೆ ಕಣದಿಂದ ಹೊರಬೀಳುವಂತಿಲ್ಲ, ಕತ್ತಲಾದರೆ ಗ್ಯಾಸ್‌ಬತ್ತಿ ಪಂದ್ಯ ಮುಗಿಯಬೇಕು. ಕಣದಲ್ಲಿ ದೇಸಾಯರನ್ನು ಬಿಟ್ಟರೆ ಮತ್ತೊಬ್ಬರು ಕಾಲಿಡುವಂತಿಲ್ಲ, ಇಂಥ ಕಟ್ಟಳೆ ಅಗಡಿಯ ಕುಸ್ತಿಗಳು ಬಹು ಜನಪ್ರಿಯವಾಗಲು ಕಾರಣವಾದವು.

ನೋಡಲು ಬರುವ ಜನರ ಸಂಖ್ಯೆ ನೂರರ ಸಂಖ್ಯೆ ದಾಟಿ ಸಾವಿರ ದಶಸಾವಿರ ಹೀಗೆ ಬೆಳೆದಾಗ, ಬೈಲುಕುಸ್ತಿ 'ಆಖಾಡ' ಕುಸ್ತಿಯಾಯಿತು. ಥೇಟರ ಬಂತು. ಆಗ ನೋಟಕರು ಹಣಕೊಟ್ಟು ಆಖಾಡದಲ್ಲಿ ಪ್ರವೇಶ ಮಾಡಬೇಕಾಯಿತು! ಈ ಸಮಯಕ್ಕಾಗಲೇ ಈ ಕುಸ್ತಿಯ ರುಚಿ ಹಳ್ಳಿಯ ಕೆಲವರನ್ನು ಆವರಿಸಿತ್ತು, ಆವರು ಈ ಶ್ರಮ ಆ ವೆಚ್ಚ ದೇಸಾಯರೊಬ್ಬರ ಮೇಲೆಯೇ ಬೀಳುವುದು ಬೇಡವೆಂದಾಗ ಹಳ್ಳಿಯ ಅಭಿಮಾನಿ ಜನ "ಕುಸ್ತಿ ಕಮೀಟಿ" ಎಂದು ಒಂದು ಸಂಸ್ಥೆಯನ್ನು ಹುಟ್ಟುಹಾಕಿದರು. ಆದರೆ ಅದರ ಚುಕ್ಕಾಣಿ ದೇಸಾಯರ ಕೈಯಲ್ಲೇ. ಆರ್ಥಿಕ ಬಲ ಮಾತ್ರ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದ ಹಳ್ಳಿಗರಿಂದ ಶೇರ ಪದ್ಧತಿ ಮಾಡಿದರು. ಈ ಶೇರಿನ ಮೊತ್ತ ಮಾತ್ರ ವಿವಿಧ ಮೌಲ್ಯದ್ದು.

ಥೇಟರ್ ಈಗಾಗಲೇ ಬಂದಿತ್ತು, ಅಲ್ಲಿ ಕುಳಿತುಕೊಂಡು ಪಂದ್ಯವನ್ನು ವೀಕ್ಷಿಸಲು ವಿವಿಧ ರೀತಿಯ ಆಸನಗಳ ವ್ಯವಸ್ಥೆ ಗ್ಯಾಲರಿ, ಕುರ್ಚಿ, ಬೆಂಚ್, ಗುಡಾರ ನೆಲ ಹೀಗೆ ವಿವಿಧ ರೀತಿಯ ಆಸನಗಳ ವ್ಯವಸ್ಥೆ ಶೇರ ಹೋಲ್ಡರ್‌ಗಳು-ತಮ್ಮ ಇಚ್ಛೆಯ ಪ್ರಕಾರ ಶೇರಿನ ಮೊತ್ತವನ್ನು ಆರಿಸಿ ಆಸನಗಳನ್ನು ಪಡೆಯಬಹುದಿತ್ತು, ಆ ಪ್ರಕಾರ ಅವರಿಗೆ ಮೂರು ದಿನ ನಡೆಯುವ ಕುಸ್ತಿಯಲ್ಲೂ ಆಸನಗಳನ್ನು ಕಾದಿರಿಸಲಾಗುತ್ತಿತ್ತು.

**ಕುಸ್ತಿಯ ಹೊಂದಾಣಿಕೆ:** ಕುಸ್ತಿಗಳು ನಡೆಯಲು ಇನ್ನೂ ಒಂದು ತಿಂಗಳ ಅವಧಿಯಿದೆಂದ ಎಂದಾಗಲೇ ಈ ದಿಶೆಯಲ್ಲಿ ಚಟುವಟಿಕೆಗಳು ಪ್ರಾರಂಭವಾಗುತ್ತಿದ್ದವು. ಎಲ್ಲ ದರ್ಜೆಯ ಪೈಲ್ವಾನರಿಗೆಲ್ಲ ಆಮಂತ್ರಣ ಹೋಗುತ್ತಿತ್ತು. ಎಲ್ಲೆಲ್ಲಿಂದಲೋ ಪೈಲ್ವಾನರು ಬರುತ್ತಿದ್ದರು. ಅವರ ಯೋಗ್ಯತೆಯ ಮೇರೆಗೆ ಗೌರವಧನವನ್ನು ನಿರ್ಧರಿಸಿ ಕುಸ್ತಿಯ ಹೊಂದಾಣಿಕೆಯಾಗುತ್ತಿತ್ತು. ಮುಂಬೈಯಲ್ಲಿ ವಾಸವಾಗಿದ್ದ ಪಂಜಾಬಿನ ಪೈಲ್ವಾನ ಅಲಂಬುವಾ ಪುಣೆಯ ವಿಷ್ಣು ಕೊಲ್ಹಾಪುರದ ಅಪ್ಪಣ್ಣ ಹೀಗೆ ಆ ನಿಟ್ಟಿನಲ್ಲಿದ್ದ ನಾಮಾಂಕಿತ ಪೈಲ್ವಾನರು ಅಗಡಿಯ ಅಖಾಡದಲ್ಲಿ ಚಿಟ್ಟಿ ಬ್ಯಾಡಗಿ ಚಂದ್ರಪ್ಪ ಜೊತೆಗೆ ಆರೇರ ಲಚ್ಚಪ್ಪ, ಸವಡಿ ಕೃಷ್ಣಪ್ಪ, ಬಾರ್ಕಿ ಮಲ್ಲಪ್ಪ ಮುಂತಾದ ಹಾಕಲು ಹಾತರೊಯುತ್ತಿದ್ದರು. ಕುಸ್ತಿಯ ಹೊಂದಾಣಿಕೆಯ ಕಾಲದಲ್ಲಿ ಎಷ್ಟೇ ಜನ ಪೈಲ್ವಾನರು ಬಂದರೂ ಅವರ ಊಟ ವಸತಿ ದೇಸಾಯರ ವಾಡೆದಲ್ಲಿಯೇ.



ಚಿದಂಬರಗೌಡ ದೇಸಾಯಿ

**ಅಗಡಿಯ ನೇಕಾರರು:** ಅಗಡಿ ಒಂದಾನೊಂದು ಕಾಲಕ್ಕೆ ಗ್ರಾಮೀಣ ಮಹಿಳೆಯರಿಗೆ ಬೇಕಾಗುವ ಬಟ್ಟೆಯನ್ನು ಸಿದ್ಧಪಡಿಸುವಲ್ಲಿ ಪ್ರಸಿದ್ಧಿಯ ತುತ್ತತುದಿಯಲ್ಲಿತ್ತು. ಅದರಿಂದಾಗಿ ಆ ಜನ ಆರ್ಥಿಕವಾಗಿ ಬಹುಗಟ್ಟಿಗರಾಗಿದ್ದರು. ಅವರು ಹುಮ್ಮಸ್ಸಿನವರೂ ಆಗಿದ್ದರು. ಆಟಪಾಟಗಳು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಆಸಕ್ತಿಯಿದ್ದವರಾಗಿದ್ದರು. ಆ ಹುರುಪು ಈ ಕುಸ್ತಿಯ ಚಟುವಟಿಕೆಯಲ್ಲಿ ಅವರನ್ನು ಹೆಚ್ಚು ಮುಂದು ಮಾಡಿತ್ತು, ಕುಸ್ತಿ ಹೊಂದಾಣಿಕೆಯಿಂದ ಹಿಡಿದು, ಥೇಟರ ಕಟ್ಟುವಲ್ಲಿ ಪ್ರಚಾರ ಲೆಕ್ಕಪತ್ರ ಮುಗಿದ ಮೇಲೆ ಅದರ ಲಾಭ ಲುಕ್ಸಾನದ ಹಂಚಿಕೆ ಮುಂತಾದ್ದರಲ್ಲಿ ಈ ಜನರ ಭಾಗವೇ ಹೆಚ್ಚಾಗಿರುತ್ತಿತ್ತು, ಇವರಲ್ಲಿಯ ಕೆಲವರ ಹೆಸರನ್ನಾದರೂ ನೆನಸಿಕೊಳ್ಳದಿದ್ದರೆ ತಪ್ಪಾದೀತು. ಗಡ್ಡದ ರಾಚಪ್ಪ, ಗಡ್ಡದ ರಾಮಣ್ಣ, ಶಿಷ್ಯ ಪ್ರಸಿದ್ಧ ಪೈಲ್ವಾನರು ರಾಯಭಾಗದ ವರನ್ನು ನೆನೆಯಬೇಕು. ಇವರ ಜೊತೆ ಅಸಂಖ್ಯಾತ ಊರ ಜನರು ಬೆನ್ನೆಲುಬಾಗಿ ನಿಲ್ಲುತ್ತಿದ್ದರು. ಅಂತೆಯೇ ಈ ಕಾರ್ಯ ಯಶಸ್ವಿಯಾಗಿ ನಡೆಯುತ್ತಿತ್ತು, ನಡೆಯಿತು!

ದಿನಕ್ಕೆ 20ಕ್ಕೂ ಹೆಚ್ಚು ಜೊತೆ ಕುಸ್ತಿಗಳು ನಡೆಯುತ್ತಿದ್ದವೆಂದು 1961ನೇ ಇಸ್ವಿಯಲ್ಲಿ ನಡೆದ ಸದ್ಯ ಲಭ್ಯವಿದ್ದ ಪ್ರಚಾರದ ಹ್ಯಾಂಡಬಿಲ್ ಸಾರುತ್ತದೆ. ಆ ಹ್ಯಾಂಡ್‌ಬಿಲ್ಲ ನೋಡಿದರೆ ಅಂದಿನ ಅವರ ಉತ್ಸಾಹವನ್ನು ಅಳೆಯಬಹುದು! ಆ ಕರಪತ್ರವೇ ಈ ಪಂದ್ಯಾವಳಿಯಿಂದ ಬಂದ ಆದಾಯವನ್ನು ವಿದ್ಯಾಸಂಸ್ಥೆಗಳಿಗಾಗಿ ಉಪಯೋಗಿಸಲಾಗುವುದೆಂದೂ ಸಾರಿದೆ!

**ಸ್ವತಃ ಗರಡಿ ಆಳು:** ಈ ಪಂದ್ಯಾಟವನ್ನು ಪ್ರಾರಂಭಿಸಿದ ಚಿದಂಬರಗೌಡಾ ಉರ್ಫ ಬಾಬಾಸಾಹೇಬ ಬಹದ್ದೂರ ದೇಸಾಯಿಯವರು ಸ್ವತಃ ಗರಡಿಯಾಳಷ್ಟೇ ಆಗಿರಲಿಲ್ಲ, ಉತ್ತಮ ಶಿಕಾರಿಯೂ ಆಗಿದ್ದರು. ಆದರೆ ಅದರ ಪ್ರಾವೀಣ್ಯ ತಮ್ಮ ಬಸನಗೌಡ ಉರ್ಫ ಭಯ್ಯಾಸಾಹೇಬ ಬಹದ್ದೂರದೇಸಾಯಿಯವರದಾಗಿತ್ತು, ಅಗಡಿಯ ಸುತ್ತ ಅಡವಿಯಿತ್ತು, ವನ್ಯ ಮೃಗಗಳೂ ಇದ್ದವು. ಆಗ ಬೇಟೆ ಆಡುವುದು ಅಪರಾಧವಾಗಿರಲಿಲ್ಲ, ಹೀಗೆಂದು ಕೆಲ ಚಿರ್ಚೆಗಳು ಇವರ ಗುಂಡಿನ ಬಲೆಗೆ ಬಿದ್ದಿದ್ದವು.



ಅಗಡಿಯಲ್ಲಿ ನಡೆಯುತ್ತಿದ್ದ ಕುಸ್ತಿ ಆಟದ ದೃಶ್ಯ

ಗರಡಿಯಾಳಾಗಿ ಗರಡಿ ಮನೆಗೆ ಹೋದಾಗ ಅಲ್ಲಿಯ ಗರಡಿ ಪಟುಗಳೊಂದಿಗೆ ಇವರು ಕುಸ್ತಿಯನ್ನು ಆಡುತ್ತಿದ್ದರು. ಈ ಸಂದರ್ಭದಲ್ಲಿ ಎದುರಾಳಿಗೆ ಮುಜಗರವಾದರೂ ಬಿಡುತ್ತಿರಲಿಲ್ಲ, ಇಂಥ ಪ್ರೋತ್ಸಾಹದಿಂದ ಊರಲ್ಲಿ ಕೆಲ ಪೈಲ್ವಾನರು ಬೆಳೆದು ಬಂದರು. ಆಗಿದ್ದ ಗರಡಿಗಳು ಈಗ ನೆನಪಾಗಿ ಉಳಿದಿವೆ. ಶಾರೀರಿಕ ಸಂಪತ್ತನ್ನು ಬೆಳೆಸಿಕೊಳ್ಳುವ ಹುಮ್ಮಸ್ಸೂ ಕುಗ್ಗಿದೆ. ಇಂದು ಸರಕಾರ ಆಟಪಾಟ ನಾಟ್ಯ, ಸಂಗೀತ, ಕಲೆ ಸಂಸ್ಕೃತಿಗಳಿಗೆ ಸಾಕಷ್ಟು ಪ್ರೋತ್ಸಾಹ ನೀಡಲು ಅವಕ್ಕಾಗಿಯೇ ಖಾತೆಗಳನ್ನು ನಿರ್ಮಿಸಿದೆ. ಆದರೆ ಯುವಕರಲ್ಲಿ ಆ ಉತ್ಸಾಹವೇ ಕುಗ್ಗಿ ಹೋಗಿದೆ. ಆಧುನಿಕ ದಿನಗಳಲ್ಲಿ ಈ ದಿಶೆಯಲ್ಲಿ ಅಂತಾರಾಷ್ಟ್ರೀಯ ಮಟ್ಟದಲ್ಲೂ ಭಾಗವಹಿಸಲು ಅನುವಿದೆ! 1943ರಲ್ಲಿ ಅಖಿಲ ಭಾರತ ಕುಸ್ತಿ ಸಂಸ್ಥೆಗಳು ಹುಟ್ಟಿಕೊಂಡು ಓಲಂಪಿಕ್ ಕಾನೂನಿಗೆ ಅನುಗುಣವಾಗಿ ರಾಜ್ಯ ಹಾಗೂ ರಾಷ್ಟ್ರಮಟ್ಟದ ಸ್ಪರ್ಧೆಗಳಲ್ಲಿ ಭಾಗವಹಿಸಲು ಅನುಕೂಲವಿದ್ದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಭಾರತವನ್ನು ಪ್ರತಿನಿಧಿಸುವ ಅನುಕೂಲವಿದೆ.

ಅದೇನೇ ಇರಲಿ. ಹೋದ ಶತಮಾನದ ಮಧ್ಯದಲ್ಲಿ ಅಗಡಿ ಗ್ರಾಮವು ಮಲ್ಲ ಯುದ್ಧದ ಪಂದ್ಯಾಟದಲ್ಲಿ ತನ್ನ ಕೀರ್ತಿಯನ್ನು ಬೆಳಗಿದೆ ಎಂದು ಹೇಳಲು ಯಾವ ಸಂಕೋಚವೂ ಇಲ್ಲ.

ಡಿ. ನಾರಾಯಣಮೂರ್ತಿ.

## ಗುರು-ಶಿಷ್ಯ ಪರಂಪರೆ ಯೋಜನೆ ಜಾರಿ

ಹುಲಕೋಟಿ(ಗದಗ), 11- ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಗುರು-ಶಿಷ್ಯ ಪರಂಪರೆ ಯೋಜನೆಯನ್ನು ರೂಪಿಸಿಕೊಂಡಿದ್ದು ಈ ಒಪ್ಪಿನೆಯಲ್ಲಿ ನಾಲ್ಕು ವಿಭಾಗ ಮಟ್ಟದಲ್ಲಿ ಒಂದೊಂದು ಕಲಿಕಾ ತರಬೇತಿಯನ್ನು ತೆರೆಯಲುದ್ದೇಶಿಸಲಾಗಿದೆ ಎಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಹಾಯಕ ನಿರ್ದೇಶಕ ಸೋಮಶೇಖರ ಹಾಲಿ ತಿಳಿಸಿದ್ದಾರೆ.

ಈ ಗುರು-ಶಿಷ್ಯ ಪರಂಪರೆಯ ಉದ್ದೇಶ ಪರಂಪರಾನುಗತ ಕಲೆಗಳಾದ ಕರ್ನಾಟಕ ಸಂಗೀತ ಗಾಯನ, ಹಿಂದೂಸ್ತಾನಿ ಸಂಗೀತ ಗಾಯನ, ನಾದಸ್ವರ, ಗೋಟುವಾದ್ಯ, ಡೊಳ್ಳು ಕುಣಿತ, ಕಂಸಾಳೆ, ದೊಡ್ಡಾಟ, ಮೂಡಲಪಾಯ, ಕೃಷ್ಣ-ಪಾರಿಜಾತ, ಸೂತ್ರದ ಬೊಂಬೆ, ಗೊರವರ ಕುಣಿತ ಹಾಗೂ ಗಮಕ ಈ ಕಲೆಗಳನ್ನು ಮಾತ್ರ ಗುರುಕುಲ ಪದ್ಧತಿಯಲ್ಲಿ ಕಲಿಸುವದು. ಅಂದರೆ ಗುರುಗಳಿರುವ ಜಾಗದಲ್ಲಿಯೇ ಆಸಕ್ತ ಶಿಷ್ಯರನ್ನು ಆಯ್ದು ಅಲ್ಲಿಯೇ ಕಲಿಸುವುದು. ಹೀಗೆ ಕಲಿಸುವ ಗುರುಗಳು ಅತ್ಯಂತ ಹಿರಿಯರು ಮತ್ತು ತಜ್ಞರು ಆಗಿರಬೇಕು. 12 ತಿಂಗಳ ಅವಧಿಯ ಈ ಶಿಕ್ಷಣಕ್ಕೆ ಗುರುಗಳಿಗೆ ತಿಂಗಳ ಸಂಭಾವನೆಯಾಗಿ ರೂ. 2000 ರೂ., ಶಿಷ್ಯರಿಗೆ ಮಾಸಿಕ ಶಿಷ್ಯವೇತನವಾಗಿ ರೂ. 500 ಗಳನ್ನು ನೀಡಲಾಗುವುದು.

ಮೇಲೆ ಸೂಚಿಸಿರುವ ಕಲಾ ಪ್ರಕಾರಗಳಲ್ಲಿ ಅತ್ಯಂತ ಪರಿಣತಿ ಹೊಂದಿರುವ ಗುರುಗಳು ತಮ್ಮ ಸಂಕ್ಷಿಪ್ತ ಜೀವನ ಹಾಗೂ ಸಾಧನೆಗಳ ವಿವರಗಳ ಸಹಿತ ಅರ್ಜಿ ಸಲ್ಲಿಸಲು ಕೋರಲಾಗಿದೆ. ಹೆಚ್ಚಿನ ವಿವರಗಳಿಗಾಗಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕನ್ನಡ ಭವನ ಅಥವಾ ಜಿಲ್ಲಾ ಸಹಾಯಕ ನಿರ್ದೇಶಕರು ಹಾಗೂ ಉಪನಿರ್ದೇಶಕರನ್ನು ಸಂಪರ್ಕಿಸಬಹುದಾಗಿದೆ.

## 15 ರಂದು ಗದಗ ಜಿಲ್ಲಾ ಸೈಕ್ಲಿಂಗ್ ಸ್ಪರ್ಧೆ

ಲಕ್ಷ್ಮೇಶ್ವರ,11- ಗದಗ ಜಿಲ್ಲಾ ಅಮೆಚೂರ ಸೈಕ್ಲಿಂಗ್ ಅಸೋಸಿಯೇಷನ್ ವತಿಯಿಂದ ಇದೇ ದಿ. 15 ರಂದು ಗದಗ ತಾಲೂಕಿನ ಅಡವಿ ಸೋಮಾಪುರದಲ್ಲಿ ಜಿಲ್ಲಾ ಮಟ್ಟದ ರಸ್ತೆ ಸೈಕ್ಲಿಂಗ್ ಚಾಂಪಿಯನ್ ಶಿಪ್ ಸ್ಪರ್ಧೆ ನಡೆಯಲಿದೆ.

ಪುರುಷರು ಮಹಿಳೆಯರು 16 ವರ್ಷದೊಳಗಿನ ಬಾಲಕರು ಮತ್ತು ಬಾಲಕಿಯರಿಗಾಗಿ ಈ ಸ್ಪರ್ಧೆ ನಡೆಯಲಿದ್ದು, ಆಸಕ್ತ ಸೈಕ್ಲಿಂಗ್ ಪಟುಗಳು ಸ್ಪರ್ಧೆ ನಡೆಯುವ ದಿನದಂದು ಬೆಳಿಗ್ಗೆ 8 ಗಂಟೆಗೆ ಹಾಜರಾಗಿ ಸಂಚಾಲಕ ಎಸ್.ಎಂ. ಉಮ್ನಾವರ ಅವರಲ್ಲಿ ಹೆಸರು ನೋಂದಾಯಿಸಲು ಕಾರ್ಯದರ್ಶಿ ಎಸ್.ಎಂ. ಕುರಣಿ ಕೋರಿದ್ದಾರೆ.

## ಹಿಂದೂ-ಮುಸ್ಲಿಂ ಭಾವೈಕ್ಯದ ದಸರಾ

ಮುಳಗುಂದ, 11- ಇಲ್ಲಿಗೆ ಸಮೀಪದ ಚಿಂಚಲಿ ಗ್ರಾಮದಲ್ಲಿ ಕಾಳಮ್ಮನ ಗುಡಿಯಲ್ಲಿ ಈಗ ದಸರಾ ಮಹೋತ್ಸವವನ್ನು ಹಿಂದೂ-ಮುಸ್ಲಿಮರು ಒಂದಾಗಿ ಆಚರಿಸುತ್ತಾರೆ.

ಹಿಂದೂ-ಮುಸ್ಲಿಂ ಬಂಧುಗಳು ತಮ್ಮ ತಮ್ಮ ಭಾವನೆಗಳನ್ನು ಬೆಸೆದುಕೊಂಡು ಒಂದಾಗಿ ಇಲ್ಲಿ ದಸರಾ ಹಬ್ಬವನ್ನು ಆಚರಿಸುತ್ತಿರುವದು ಇದೇ ಮೊದಲ ಬಾರಿಯೇನಲ್ಲ, ಈ ದೇವಾಲಯದಲ್ಲಿ ಇದು ಪ್ರತಿವರ್ಷದ ದಿನಚರಿ. ತಪ್ಪದ ಸಂಪ್ರದಾಯ.

ಪ್ರತಿವರ್ಷವೂ ಸಾವಿರ ರೂ.ಗಳನ್ನು ಖರ್ಚುಮಾಡಿ, ವಿಶೇಷ ವಿದ್ಯುದ್ದೀಪಾಲಂಕಾರದಿಂದ ಅಲಂಕರಿಸುವದಲ್ಲದೇ ಘಟಸ್ಥಾಪನೆಯಾದಾಗಿನಿಂದ ಹಿಡಿದು ಪ್ರತಿದಿನವೂ ನೂರಾರು ಬಡವರಿಗೆ ಅನ್ನದಾನವನ್ನು ಕೂಡಾ ಮಾಡುವದು ಈ ಗುಡಿಯ ಮತ್ತೊಂದು ವಿಶೇಷ.

ಈ ಗುಡಿಯ ಸುತ್ತಮುತ್ತಲೂ ವಾಸಿಸುವ ಮುಸ್ಲಿಂ ಸಮಾಜದವರು ಕಡು ಬಡವರಾದರೂ ತಲಾ ನೂರು ನೂರಾಐವತ್ತು ರೂ.ಗಳಂತೆ ಚಂದಾ ನೀಡುತ್ತಾರಲ್ಲದೆ ಒಂಭತ್ತು ದಿನಗಳವರೆಗೆ ದುಡಿದು ಪ್ರತಿಯೊಂದು ಕಾರ್ಯದಲ್ಲಿ ತನು-ಮನ-ಧನದಿಂದ ತ್ರಿಕರಣ ಪೂರ್ವಕವಾಗಿ ಸೇವೆ ಸಲ್ಲಿಸುತ್ತಾರೆ.

ಈ ಸಮಾರಂಭದ ನೇತೃತ್ವವನ್ನು ಇಲ್ಲಿಯ ವಿ.ಸಿ. ಪಾಟೀಲ ಅವರು ವಹಿಸಿಕೊಂಡು ಇತರರಿಗೂ ಮಾರ್ಗದರ್ಶಕರಾಗಿದ್ದಾರೆ

ದಸರೆಯಂತಹ ರಾಷ್ಟ್ರೀಯ ಮಹತ್ವದ ಹಬ್ಬವನ್ನು ಇಲ್ಲಿ ಹಿಂದೂ-ಮುಸ್ಲಿಂ ಎಂಬ ಭೇದವಿಲ್ಲದೇ ಆಚರಿಸುತ್ತಿರುವದಕ್ಕೆ ಜಾತ್ಯತೀತ ಜನತಾ ದಳದ ರಾಜ್ಯ ಉಪಾಧ್ಯಕ್ಷರಾದ ಶ್ರೀ ನೀಲಗುಂದ ಮಹಾಸ್ವಾಮಿಗಳು ಬಹುವಾಗಿ ಮೆಚ್ಚಿಕೊಂಡು ಗುಡಿಯ ಜೀರ್ಣೋದ್ಧಾರಕ್ಕೆ ರಾಜ್ಯ ಸರಕಾರ ಮುಜರಾಯಿ ಇಲಾಖೆಯಿಂದ ನೆರವು ದೊರಕಿಸಿಕೊಡುವ ಇಚ್ಛೆಯನ್ನು ವ್ಯಕ್ತಪಡಿಸಿದ್ದಾರೆಂದು ರಹಿಮಾನ ಮಜ್ಜೀಗುಡ್ಡ ಮುಳಗುಂದ ತಿಳಿಸಿದ್ದಾರೆ.

## ಮೋಳಿಗೆ ಮಾರಯ್ಯನ ಬದುಕು ಎಲ್ಲರಿಗೂ ಆದರ್ಶಪ್ರಾಯ

ಶಿರಹಟ್ಟಿ, 11- ಒಬ್ಬ ರಾಜನಾಗಿರುವ ವ್ಯಕ್ತಿ ಸಕಲ ಭೋಗ-ಭಾಗ್ಯಗಳಿಂದ ಮೆರೆಯಬೇಕಾದವನು ಶರಣ ಸಿದ್ಧಾಂತಕ್ಕೆ ಮಾರುಹೋಗಿ ತನ್ನ ರಾಜ್ಯವನ್ನು ತ್ಯಜಿಸಿ ತನ್ನ ಧರ್ಮಪತ್ನಿಯೊಂದಿಗೆ ಕಲ್ಯಾಣಕ್ಕೆ ಬಂದು ಕಟ್ಟಿಗೆ ಮಾರುವ ಕಾಯಕವನ್ನು ತುಂಬಾ ನಿಷ್ಠೆಯಿಂದ ಮಾಡಿ ಜಂಗಮ ದಾಸೋಹವನ್ನು ಯಶಸ್ವಿಯಾಗಿ ನಡೆಸಿದ ಮೋಳಿಗೆಯ ಮಾರಯ್ಯನವರ ಬದುಕು ನಮಗೆಲ್ಲ ಆದರ್ಶವಾಗಿದೆ ಎಂದು ಆರ್.ಬಿ. ಕಮತ ಇಲ್ಲಿಯ ಜಿ.ಆರ್. ಸಜ್ಜನಪುರ ಅವರ ಮನೆಯಲ್ಲಿ ಹಾಕಿಕೊಂಡ ಶರಣ ಸಾಹಿತ್ಯ ಗೋಷ್ಠಿಯ ಉಪನ್ಯಾಸಕರಾಗಿ ಮಾತನಾಡಿದರು.

ರಂಜನಾ ಅವರ ಪ್ರಾರ್ಥನೆಯೊಂದಿಗೆ ಆರಂಭವಾದ ಕಾರ್ಯಕ್ರಮದಲ್ಲಿ ಎಚ್.ಎಂ. ದೇವಗಿರಿಯವರು ಸ್ವಾಗತಿಸಿದರು. ಗುರುಸಿದ್ಧಪ್ಪ ಹಲಸೂರ ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ಮುಧೋಳಕರ ಸಹೋದರಿಯರಿಂದ ವಚನಗಾಯನ ನಡೆಯಿತು.

ಅಧ್ಯಕ್ಷತೆಯನ್ನು ಜಿ.ಆರ್. ಸಜ್ಜನಪುರ ವಹಿಸಿ ಶರಣರ ತತ್ವಸಿದ್ಧಾಂತಗಳನ್ನು ಅಳವಡಿಸಿಕೊಂಡರೆ ನಮ್ಮೆಲ್ಲರ ಮನ-ಮನೆಗಳು ಪರಿಶುದ್ಧಗೊಂಡು ಒಂದು ಸುಸಂಸ್ಕೃತವಾದ ಸಮಾಜ ನಿರ್ಮಾಣಗೊಳ್ಳಲು ಸಾಧ್ಯ ಎಂದು ಅಭಿಪ್ರಾಯಪಟ್ಟರು. ವೈ.ಬಿ. ಕೋಣ್ಣೂರ ಕಾರ್ಯಕ್ರಮ ನೆರವೇರಿಸಿದರು.

ಕೆ.ಎ. ಬಳಿಗೇರ ವಂದಿಸುತ್ತ ಮುಂದಿನ ಗೋಷ್ಠಿ ಎಂ.ಕೆ. ದೇವನೂರ ಅವರ ಮನೆಯಲ್ಲಿ ಅರುಹು ಕುರುಹಿನ ಕುರುಬ ಗೊಲ್ಲಾಳೇಶ ಎಂಬ ವಿಷಯದ ಮೇಲೆ ಎಂ.ಎಸ್. ಬಿಂಗಿ ಉಪನ್ಯಾಸ ನೀಡಲಿದ್ದು ಸರ್ವರೂ ಭಾಗವಹಿಸಬೇಕೆಂದು ವಿನಂತಿಸಿದರು.

## ಸಾಧನೆಯ ಛಲಕ್ಕೆ ದೊರೆತ ಪ್ರತಿಫಲ

ಮಾನಸಿಕ ಸ್ಥೈರ್ಯ, ಸಾಧಿಸಬೇಕೆಂಬ ಛಲವಿದ್ದರೆ ಕಲ್ಲನ್ನೂ ಕೈಯಿಂದಲೇ ಕುಟ್ಟಿ ಪುಡಿ ಪುಡಿ ಮಾಡಬಹುದು. ಇಂಥ ಮಾನಸಿಕ ಸ್ಥೈರ್ಯ ಸಾಧನೆಯ ಛಲವನ್ನು ತೋರಿದ ಧಾರವಾಡದ ಕೊಟ್ರೇಶ ಯ. ವಿಭೂತಿ ರಾಯಚೂರಿನಲ್ಲಿ ನಡೆದ ರಾಜ್ಯ ಮಟ್ಟದ ಕಿರಿಯರ ಅಥ್ಲೆಟಿಕ್ ಚಾಂಪಿಯನ್ ಶಿಪ್‌ನ 10 ಕಿ.ಮೀ. ನಡಿಗೆ ಸ್ಪರ್ಧೆಯಲ್ಲಿ ಕಂಚಿನ ಪದಕಕ್ಕೆ ಪಾತ್ರರಾಗಿದ್ದಾರೆ.

20 ವರ್ಷದೊಳಗಿನವರಿಗಾಗಿ ನಡೆಯಲಿದ್ದ ಸ್ಪರ್ಧೆಯಲ್ಲಿ ಮ್ಯಾರಥಾನ ಓಟದ ವಿಭಾಗದಲ್ಲಿ ಕೊಕ್ಕೆಳಿಯಲು ಈತ ಬಹಳ ದಿನಗಳಿಂದಲೇ ಸಿದ್ಧತೆ ನಡೆಸಿದ್ದ. ಪದಕ ಗೆಲ್ಲುವ ಭರವಸೆಯೊಂದಿಗೆ ರಾಯಚೂರನ್ನು ತಲುಪಿದ್ದ.

ಆದರೆ ಅಲ್ಲಿ ಆದದ್ದೇ ಬೇರೆ. ಅಭ್ಯಾಸದ ಸಮಯದಲ್ಲಿ ಕಾಣಿಸಿಕೊಂಡ ಕಾಲು ನೋವು ಕೊಟ್ರೇಶರನ್ನು ತೀವ್ರವಾಗಿ ಹಿಂಸಿಸತೊಡಗಿತು. ಈ ನೋವು ಪದಕಗಳಿಸುವ ಅವಕಾಶವನ್ನೆಲ್ಲಿ ಕಸಿದುಕೊಳ್ಳುತ್ತದೋ ಎಂಬ ಅಳುಕು ಈತನಲ್ಲಿ ತಲೆ ಎತ್ತಿತು. ಆದೇ ಸಮಯದಲ್ಲಿ ಇವರ ಮನೋಸ್ಥೈರ್ಯ, ಸಾಧನೆಯ ಛಲ ಇವರ ಸ್ವಾಭಿಮಾನವನ್ನು ಒಡಿದೆಬ್ಬಿಸಿದವು. ತನ್ನೊಡನೆ ಬಂದ ಇತರ ಕ್ರೀಡಾಳುಗಳ ಉಮೇದು, ಉತ್ಸಾಹ ಈತನನ್ನೂ ಸ್ಪರ್ಧೆಗಿಳಿಯುವ ಸಾಹಸಕ್ಕಿಳಿಯಲು ಪ್ರೇರೇಪಿಸಿತು.

ಸರಿ, ತಾನು ಶ್ರಮಪಟ್ಟು ರೂಢಿಸಿಕೊಂಡ ವಿಭಾಗವೇ ಅಲ್ಲದ 10.8 ಕಿ.ಮೀ. ನಡಿಗೆ ಸ್ಪರ್ಧೆಗೆ ಇಳಿಯಲೂ ಮುಂದಾದ ಕಾಲು ನೋವಿನ ಪರಿವೆಯೂ ಇಲ್ಲದೆ ನಡೆದೇ ನಡೆದ. ಕೈ ಸೇರಲಿದ್ದ ರಜತ ಪದಕವನ್ನೂ ಗೆಲ್ಲಲಿದ್ದ. ಆದರೆ ಅದೇ ಸ್ಪರ್ಧೆಗಾಗಿ ಸಿದ್ಧಗೊಂಡಿದ್ದ ಮತ್ತೊಬ್ಬ ಪಟು ತೋರಿದ ಚಾಣಾಕ್ಷತೆಯಿಂದಾಗಿ ಆ ಪದಕ ಕೈ ತಪ್ಪಿತು. ಆದರೂ ಕಂಚಿನ ಪದಕ ಇವರ ಕೊರಳಿಗೇರಿತು.

ತಾನು ರೂಢಿಸಿಕೊಂಡ ಸ್ಪರ್ಧೆಗೆ ಬದಲಾಗಿ ಬೇರೊಂದು ಸ್ಪರ್ಧೆಯಲ್ಲಿ ಪಾಲ್ಗೊಂಡು ಕಾಲು ನೋವನ್ನು ಮೆಟ್ಟಿನಿಂತು ತೃತೀಯ ಸ್ಥಾನಗಳಿಸಿ ಕಂಚನ್ನು ಪಡೆದದ್ದು ಶ್ಲಾಘನೀಯವಲ್ಲವೇ?

ಕೊಟ್ರೇಶ ವಿಭೂತಿ

ಧಾರವಾಡ ಜಿಲ್ಲಾ ಗ್ರಾಮೀಣ ಕ್ರೀಡಾಕೂಟದಲ್ಲಿ ಪ್ರಶಸ್ತಿ ಗೆದ್ದ ಸುಳ್ಳದ ಶ್ರೀಗುರು ಶಿವಾನಂದ ಭಾರತಿ ಪ್ರೌಢಶಾಲೆಯ ಕಬಡ್ಡಿ ತಂಡದೊಂದಿಗೆ ಎಂ.ಎಸ್. ದಾನಪ್ಪಗೌಡರ, ಬೇಬ ಎನ್.ಕೆ., ಎಂ.ಎಂ. ಮಾಳಾಸೂರ, ಜಿ.ಎಸ್. ಹಸಬಿ, ಎಸ್.ಎಸ್. ಜಗತಾಪ ಚಿತ್ರದಲ್ಲಿದ್ದಾರೆ.

ಅಕ್ಕಿಆಲೂರಿನಲ್ಲಿ ನಡೆದ ಜಿಲ್ಲಾ ಮಟ್ಟದ ಕ್ರೀಡಾಕೂಟದ ಬಾಲ್ ಬ್ಯಾಡ್ಮಿಂಟನ್‌ದಲ್ಲಿ ಪ್ರಥಮ ಸ್ಥಾನ ಪಡೆದ ಆಲದಕಟ್ಟಿ ಬಸವೇಶ್ವರ ಪ್ರೌಢ ಶಾಲೆಯ ವಿದ್ಯಾರ್ಥಿಗಳು ಶಿಕ್ಷಕ ವೃಂದದೊಂದಿಗೆ.





ಹಾವೇರಿ ಜಿಲ್ಲಾಧಿಕಾರಿ ಶ್ರೀಮತಿ ಟ. ಮುಕ್ತಾಂಬಾ ಅವರು ರಾಜ್ಯ ನಾಟಕ ಅಕಾಡೆಮಿ ಹೊರತಂದ ಪುಸ್ತಕಗಳನ್ನು ಇತ್ತೀಚೆಗೆ ಬಿಡುಗಡೆಗೊಳಿಸಿದರು. ಶಾಸಕ ಬಸವರಾಜ ಶಿವಣ್ಣವರ, ಹಿರಿಯ ನಾಟಕಕಾರ ಪ್ರೊ. ಸಿದ್ದಲಿಂಗ ಪಟ್ಟಣಶೆಟ್ಟಿ, ಜಿ.ಎಂ. ಕುಲಕರ್ಣಿ ಚಿತ್ರದಲ್ಲಿ ಇದ್ದಾರೆ.



ಮುಂಡರಗಿಯಲ್ಲಿ ಪಂಚವಟಿ ಸಸಿಗಳನ್ನು ಜಗದ್ಗುರು ಅನ್ನದಾನೇಶ್ವರ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ನೀಡುತ್ತಿರುವುದು.

## ಪಂಚವಟಿ ಸಸಿಗಳ ವನಮಹೋತ್ಸವ

ಮುಂಡರಗಿ, 11- ಮುಂಡರಗಿಯ ಜಗದ್ಗುರು ಅನ್ನದಾನೇಶ್ವರ ಸಂಸ್ಥಾನಮಠದಲ್ಲಿ ಜಗದ್ಗುರು ಅನ್ನದಾನೇಶ್ವರ ಮಹಾಸ್ವಾಮಿಗಳ ಅಮೃತ ಹಸ್ತದಿಂದ ಪಂಚವಟಿ ಸಸಿಗಳಾದ ಬಿಲ್ವ, ಬನ್ನಿ ಬೇವು, ಹತ್ತಿ, ಅರಳಿ ಸಸಿಗಳನ್ನು ನೆಡಲಾಯಿತು.

ಈ ಕಾರ್ಯಕ್ರಮವನ್ನು ಜಗದ್ಗುರು ಅನ್ನದಾನೇಶ್ವರ ಸಂಸ್ಥಾನಮಠ, ವಿಶ್ವ ಪರಿಸರ ಸಂರಕ್ಷಣಾ ಸಂಘ ಹಾಗೂ ಕೆ. ಆರ್. ಬೆಲ್ಲದ ಮಹಾವಿದ್ಯಾಲಯದ ಎನ್. ಎಸ್. ಎಸ್. ಘಟಕಗಳು ಸಂಯುಕ್ತವಾಗಿ ಹಮ್ಮಿಕೊಂಡಿದ್ದವು. ಈ ಸಂದರ್ಭದಲ್ಲಿ ಜ.ಅ. ವಿದ್ಯಾ ಸಮಿತಿಯ ಆಡಳಿತಾಧಿಕಾರಿ ಪ್ರೊ. ಎ. ಬಿ. ಹಿರೇಮಠ, ಪ್ರಾ. ಎಸ್. ಬಿ. ಕೆ. ಗೌಡರ, ಪ್ರೊ. ಎ. ಮಂಜುನಾಥ, ಪ್ರೊ. ವೀರಣ್ಣ ಅಂಗಡಿ ಹಾಗೂ ಎಸ್. ಎಸ್. ಎಸ್. ಸ್ವಯಂ ಸೇವಕರು ಉಪಸ್ಥಿತರಿದ್ದು ಸಸಿಗಳನ್ನು ನೆಟ್ಟರು.

## ಭಾವೈಕ್ಯತಾ ಸೈಕಲ್ ಯಾತ್ರೆಗೆ ಸ್ವಾಗತ

[illegible] 11- ಗಾಂಧಿ ಜಯಂತಿ ಅಂಗವಾಗಿ ಜಿಲ್ಲೆಯ ಸೇವಾದಳದ ಸುಮಾರು 30 ಯುವಕರು ಸೈಕಲ್ ಯಾತ್ರೆ ಕೈಗೊಂಡಿದ್ದು ಅಕ್ಕಿಆಲೂರಿಗೆ ಆಗಮಿಸಿದಾಗ ಸ್ಥಳೀಯ ಭಾಸೆ. ದಳದ [illegible] ಮಾರ್ಗದರ್ಶನದಲ್ಲಿ ಪುರಸಭೆಯ ಅಧ್ಯಕ್ಷ ಈಶ್ವರಪ್ಪ ಉಳ್ಳಾಗಡ್ಡಿಯವರ ಅಧ್ಯಕ್ಷತೆಯಲ್ಲಿ ಸ್ವಾಗತಿಸಲಾಯಿತು. ನಂತರ ನಡೆದ ಸಮಾರಂಭದಲ್ಲಿ ಈಶ್ವರಪ್ಪ ಉಳ್ಳಾಗಡ್ಡಿ ಮಾತನಾಡಿ, ಗಾಂಧೀಜಿಯವರು ಕಂಡ ರಾಮರಾಜ್ಯದ ಕನಸನ್ನು ನನಸು ಮಾಡಲು ಶ್ರಮಿಸುವಂತೆ ಯುವಕರಿಗೆ ಕರೆಕೊಟ್ಟರು. ಮುಖ್ಯ ಅತಿಥಿಗಳಾಗಿ ಗಂಗನಗೌಡ [illegible] ಬಸವರಾಜ [illegible], ಎಸ್.ವಿ. ಹಿರೇಮಠ ಆಗಮಿಸಿದ್ದರು.ನಂತರ ಯಾತ್ರೆಯನ್ನು ಹಾರ್ದಿಕವಾಗಿ ಬೀಳ್ಕೊಡಲಾಯಿತು.[illegible] ತಾಲೂಕಾ ಕಾರ್ಯದರ್ಶಿ [illegible] ಕಾರ್ಯಕ್ರಮ ನಿರೂಪಿಸಿದರು. ಶಿಕ್ಷಕರಾದ [illegible] ಸ್ವಾಗತಿಸಿದರು. [illegible] ವಂದಿಸಿದರು. [illegible] ಉಪಸ್ಥಿತರಿದ್ದರು.



### ಸಾಹಿತ್ಯದ ಕಂಪು ಬೀರುವ

# ಹಾವನೂರ ಪ್ರತಿಷ್ಠಾನಕ್ಕೆ ಐದುವರ್ಷ

ಹಾವೇರಿಯ ಹಾವನೂರ ಪ್ರತಿಷ್ಠಾನಕ್ಕೆ ಈಗ ಐದು ವರ್ಷ. ಸಾಹಿತ್ಯದಲ್ಲಿ ಸದಭಿರುಚಿಯನ್ನು ಬೆಳೆಸಿ, ಉತ್ತಮ ಕೃತಿಗಳನ್ನು ಗುರುತಿಸುವ ಉದ್ದೇಶ ಹೊಂದಿರುವ ಹಾವನೂರ ಪ್ರಶಸ್ತಿ ಈಗ ಪ್ರತಿಷ್ಠಿತ ಪ್ರಶಸ್ತಿಗಳಲ್ಲಿ ಒಂದಾಗಿ ನಿಂತಿದೆ.

ಸಾಹಿತ್ಯ, ಸಂಗೀತ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿರುವ ಹಾವೇರಿಯ ಹೆಸರಿಗೆ ಹೊಸ ಮೆರಗು ತರುವಲ್ಲಿ ಯಶಸ್ವಿಯಾಗಿದೆ. ಇಲ್ಲಿಯ ವೀರಭದ್ರೇಶ್ವರ ಮುದ್ರಣಾಲಯದ ರಾಮಚಂದ್ರ ಹಾವನೂರ ಮತ್ತು ಶ್ರೀಮತಿ ಕಾಳಮ್ಮ ಹಾವನೂರ ಈ ಪ್ರತಿಷ್ಠಾನದ ಸಂಸ್ಥಾಪಕರು.

ಕಡು ಬಡತನ, ಕಷ್ಟಗಳ ನಡುವೆ ಹೋರಾಟದ ಜೀವನ ನಡೆಸಿ ಸಮಾಜದಲ್ಲಿ ಉತ್ತಮ ಸ್ಥಾನ-ಮಾನ ಹೊಂದಿರುವ ಹಾವನೂರ ದಂಪತಿಗಳು ಸಾಂಸ್ಕೃತಿಕ ರಂಗಕ್ಕೆ ತಮ್ಮ ಕಾಣಿಕೆಯನ್ನು ಈ ಪ್ರಶಸ್ತಿ ಮೂಲಕ ನೀಡಿದ್ದಾರೆ.

ಶ್ರೀಮತಿ ಕಾಳಮ್ಮ ಹಾವನೂರ ಹಾವೇರಿ ಪುರಸಭೆಯ ಅಧ್ಯಕ್ಷರಾಗಿ ಕೂಡ ತಮ್ಮ ಸೇವೆ ಸಲ್ಲಿಸಿದ್ದಾರೆ. ಇವರ ಪುತ್ರ ವಿರೂಪಾಕ್ಷ ಹಾವನೂರ ಈ ಪ್ರತಿಷ್ಠಾನದ ಅಧ್ಯಕ್ಷರು.

1996ರಲ್ಲಿ ಆರಂಭಗೊಂಡ ಹಾವನೂರ ಪ್ರತಿಷ್ಠಾನ ಪ್ರತಿವರ್ಷ ಕಾದಂಬರಿಗೆ ಪ್ರಶಸ್ತಿಯನ್ನು ನೀಡುತ್ತಿದೆ. ಹೊಸ ಹೊಸ ಉತ್ತಮ ಕಾದಂಬರಿಗಳನ್ನು ದಿನ ಬೆಳಗಾಗುವುದರೊಳಗೆ ನಾಡಿನ ಓದುಗರ ಗಮನ ಸೆಳೆಯುವಂತೆ ಗುರುತಿಸಿ ಪ್ರಶಸ್ತಿ ನೀಡಿದೆ.



೧೯೯೬ರಲ್ಲಿ ಪ್ರತಿಷ್ಠಾನದ ಮೊದಲ ಪ್ರಶಸ್ತಿಯನ್ನು ಖ್ಯಾತಕಾದಂಬರಿಕಾರ ದು.ನಿಂ. ಬೆಳಗಲಿ ಅವರು ನಾರಾಯಣ ಅವರಿಗೆ ಪ್ರದಾನ ಮಾಡಿದಾಗಿನ ಚಿತ್ರ.

ದಾವಣಗೇರೆಯ ಕನ್ನಡಿಗ ನಾರಾಯಣಿ ತಮ್ಮ ಕಾದಂಬರಿ 'ಕಾಂಡ' (1996)ಕ್ಕೆ ಪ್ರಶಸ್ತಿ ಪಡೆದ ನಂತರ ತದ ನಂತರದಲ್ಲಿ ಏಳು ಪ್ರಶಸ್ತಿಗಳು ಈ ಕಾದಂಬರಿಗೆ ಬಂದವು.

1997 ರಲ್ಲಿ ಬಾಗಲಕೋಟೆಯ ಪ್ರೊ. ಬಾಳಾಸಾಹೇಬ ಲೋಕಾಪುರ ಅವರ 'ಬಿಸಿಲು ಪುರ'ಕಾದಂಬರಿ ಪ್ರಶಸ್ತಿ ಪಡೆದು ಅದೇ ವರ್ಷ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ "ಬಿಸಿಲುಪುರ" ಪಡೆಯಿತು.

1998 ರಲ್ಲಿ ಬೆಂಗಳೂರಿನ ಡಾ. ಆರ್.ಆರ್. ಪಾಂಗಾಳರ 'ಸಾತಿಚರಾಮಿ', 1999 ದಾವಣಗೆರೆಯ ಬ್ರಹ್ಮದೇವ ಹದಳಗಿ ಅವರ 'ಗಂಗವ್ವ' ಹಾವಣ್ಣ ಪ್ರಶಸ್ತಿ ಪಡೆದವು.

ಕನ್ನಡದ ಹಿರಿಯ ಲೇಖಕರಾದ ದಿ. ದು.ನಿಂ. ಬೆಳಗಲಿ, ನಾ ಡಿಸೋಜಾ, ರಂ.ಶಾ. ವೈದೇಹಿ ಪ್ರಶಸ್ತಿ ವಿತರಣೆಗೆ ಆಗಮಿಸಿದ್ದಾರೆ.

ಇದೇ 15 ರಂದು ಹಾವೇರಿಯಲ್ಲಿ ಜರುಗಲಿರುವ ಈ ಬಾರಿಯ ಹಾವನೂರ ಪ್ರಶಸ್ತಿ ಬಾಗಲಕೋಟೆ ಮೂಲದ ಲೇಖಕಿ ಶ್ರೀಮತಿ ರೇಖಾ ಕಾಖಂಡಕಿ ಪಡೆದಿದ್ದಾರೆ. ಹಾವನೂರ ಪ್ರಶಸ್ತಿಯನ್ನು ಪಡೆದ ಮೊದಲ ಲೇಖಕಿ ಶ್ರೀಮತಿ ರೇಖಾ ಆಗಿದ್ದಾರೆ.

'ಶಬ್ದಗಳು' 'ಗ್ಲಾನಿ' ಕಾದಂಬರಿಯ ಮೂಲಕ ನಾಡಿನ ಓದುಗರ ಮಾನ್ಯತೆ ಪಡೆದಿರುವ ಖ್ಯಾತ ಲೇಖಕ ಕೆ.ಟಿ. ಗಟ್ಟಿ ಮತ್ತು ಖ್ಯಾತ ಬಂಡಾಯ ಲೇಖಕ ಕುಂ. ವೀರಭದ್ರಪ್ಪ ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ಪಾಲ್ಗೊಳ್ಳಲಿರುವರು.

ನಾಡಿನ ಸಾಂಸ್ಕೃತಿಕ ಶ್ರೀಮಂತಿಕೆಯಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನ ಪಡೆದಿರುವ ಹಾವನೂರ ಪ್ರಶಸ್ತಿ ಹಾವೇರಿ ಜಿಲ್ಲೆಯ ಕೊಡುಗೆ ಮತ್ತು ಹಿರಿಮೆಗಳಾಗಿವೆ.

ಪ್ರಕಾಶ ಜೋಶಿ

## ಬೆಳ್ಳಟ್ಟಿ ಸಿ.ಆರ್.ಸಿ ಸಮಾಲೋಚನಾ ಸಭೆ

ಶಿರಹಟ್ಟಿ,11- ತಾಲೂಕಿನ ಬೆಳ್ಳಟ್ಟಿ ಕ್ಲಸ್ಟರ ಮಟ್ಟದ ಮಾಸಿಕ ಸಮಾಲೋಚನಾ ಸಭೆ ಇತ್ತೀಚೆಗೆ ಬೆಳ್ಳಟ್ಟಿಯಲ್ಲಿ ಜರುಗಿತು. ಈ ಸಭೆಯ ಅಧ್ಯಕ್ಷತೆಯನ್ನು ಶಿರಹಟ್ಟಿ ತಾಲೂಕಾ ಪ್ರಾಥಮಿಕ ಶಾಲಾ ಶಿಕ್ಷಕ-ಶಿಕ್ಷಕಿಯರ ಸಹಕಾರಿ ಪತ್ತಿನ ಸಂಘದ ಅಧ್ಯಕ್ಷ ಎಸ್.ಎನ್. ದಲಾಲಿ ವಹಿಸಿದ್ದರು.

ಮುಖ್ಯ ಅತಿಥಿಗಳಾಗಿ ಹೆಬ್ಬಾಳ ಸಿ.ಆರ್.ಸಿ. ಸಂಯೋಜಕ ಬಿ.ಎಸ್. ಈಳಗೇರ ಆಗಮಿಸಿದ್ದರು. ಸಂಯೋಜಕ ಎಸ್.ಬಿ. ಸಜ್ಜನಪೂರ ಸ್ವಾಗತಿಸಿದರು. ಪ್ರಾಸ್ತಾವಿಕವಾಗಿ ನೋಡಲ್ ಅಧಿಕಾರಿ ಎಂ.ಎಚ್. ಹುಲ್ಲೂರ ಮಾತನಾಡಿ, ತಾಲೂಕಿನ ಶಾಲೆಗಳಲ್ಲಿ ಈಗ ಕಲಿಕಾ ವಾತಾವರಣ ನಿರ್ಮಾಣವಾಗಿದ್ದು ಕಲಿಕಾ ಗುಣಮಟ್ಟ ಸುಧಾರಣೆಯಾಗಬೇಕೆಂದು ಎಚ್ಚರಿಸಿದರು

ಸಭೆಯಲ್ಲಿ ಬೆಳ್ಳಟ್ಟಿ ಕ್ಲಸ್ಟರಿನ 56 ಶಿಕ್ಷಕ ಶಿಕ್ಷಕಿಯರು ಭಾಗವಹಿಸಿ ಈ ತಿಂಗಳಲ್ಲಿ ಬೋಧಿಸಿದ ಪಾಠಗಳನ್ನು ಚಟುವಟಿಕೆ ಆಧಾರಿತವಾಗಿ ಹೇಗೆ ನಿರ್ವಹಿಸಿದರು ಎಂಬ ಬಗ್ಗೆ ಚರ್ಚಿಸಿದರು. ಹಾಗೂ ಮುಂದಿನ ತಿಂಗಳ ಪಾಠದ ಬಗ್ಗೆ ಚರ್ಚೆ ಮಾಡಲಾಯಿತು. ಎಸ್.ಬಿ. ಸಜ್ಜನಪೂರ ವಂದಿಸಿದರು.



ಹಾವೇರಿ ಜಿಲ್ಲಾ ಮಟ್ಟದ ಕ್ರೀಡಾಕೂಟದ ಹಾಕಿ ವಿಭಾಗದಲ್ಲಿ ಪ್ರಥಮ ಸ್ಥಾನ ಗಳಿಸಿದ ರಾಣೆಬೆನ್ನೂರ ರಾಜರಾಜೇಶ್ವರಿ ಶಾಲೆ ವಿದ್ಯಾರ್ಥಿನಿಯರು ದೈಹಿಕ ಶಿಕ್ಷಕ, ಮ್ಯಾನೇಜರ ಹಾಗೂ ಆಡಳಿತಾಧಿಕಾರಿಗಳೊಂದಿಗೆ.

## ರಾಜ್ಯಮಟ್ಟದ ಕ್ರೀಡಾಕೂಟಕ್ಕೆ ಆಯ್ಕೆ

ರಾಣೆಬೆನ್ನೂರ,-11- ಇಲ್ಲಿನ ಶ್ರೀ ರಾಜ-ರಾಜೇಶ್ವರಿ ಪ್ರೌಢಶಾಲೆಯ ವಿದ್ಯಾರ್ಥಿನಿಯರು ಇತ್ತೀಚೆಗೆ ಹಾವೇರಿಯ ಜಿಲ್ಲಾಮಟ್ಟದ ಕ್ರೀಡಾಕೂಟದಲ್ಲಿ ಹಾಕಿ ವಿಭಾಗದಲ್ಲಿ ಪ್ರಥಮ ಸ್ಥಾನಗಳಿಸಿ, ಮಂಡ್ಯದಲ್ಲಿ ನಡೆಯಲಿರುವ ರಾಜ್ಯಮಟ್ಟದ ಕ್ರೀಡಾಕೂಟಕ್ಕೆ ಆಯ್ಕೆಯಾಗಿದೆ.

ಹಾಕಿಯಲ್ಲಿ ಭರ್ಜರಿ ಜಯಗಳಿಸಿದ ಶಾಲೆಯ ವಿದ್ಯಾರ್ಥಿನಿಯ ಹಾಕಿ ತಂಡವನ್ನು ಶಾಲೆಯ ಆಡಳಿತ ಮಂಡಳಿ, ಶಿಕ್ಷಕ ಸಿಬ್ಬಂದಿಯು ಅಭಿನಂದಿಸಿದೆ. ಹಾಕಿ ತಂಡದ ಪ್ರತಿಯೋರ್ವ ಆಟಗಾರರು ದಿಟ್ಟ ಆಟ ಪ್ರದರ್ಶಿಸಿದ್ದನ್ನು ಸ್ಮರಿಸಿರುವ ಸಂಸ್ಥೆಯು ರಾಜ್ಯಮಟ್ಟದ ಕ್ರೀಡಾಕೂಟದಲ್ಲಿ ವಿಜಯಿಯಾಗಿ ಪ್ರಶಸ್ತಿ ಗಳಿಸಲೆಂದು ಹಾರೈಸಿದ್ದಾರೆ.

## ಚಂದನ ಟಿ.ವಿ.ಯಲ್ಲಿ ಅನ್ನದಾನೀಶ್ವರ ಮಠದ ಸಾಕ್ಷ್ಯಚಿತ್ರ

ಮುಂಡರಗಿ, 11- ಶಂಕರಲಿಂಗ ಸುಗ್ನಳ್ಳಿಯವರು ನಿರ್ದೇಶಿಸಿದ ಕರ್ನಾಟಕದ ಗುರುಕುಲ ದರ್ಶನ ಎಂಬ ಸಾಕ್ಷ್ಯಚಿತ್ರ ಚಂದನ ದೂರದರ್ಶನದಲ್ಲಿ ಕಳೆದ ಎರಡು ವಾರಗಳಿಂದ ಪ್ರತಿ ರವಿವಾರ ಮಧ್ಯಾಹ್ನ 2ಕ್ಕೆ ಪ್ರಸಾರವಾಗುತ್ತಿದ್ದು, ದಿ. 15ರಂದು ಮುಂಡರಗಿಯ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನ ಮಠದ ಕುರಿತಾದ ಸಾಕ್ಷ್ಯಚಿತ್ರ ಪ್ರಸಾರವಾಗಲಿದೆ.

ಈ ಗುರುಕುಲ ದರ್ಶನದಲ್ಲಿ, ಕೊಪ್ಪಳದ ಗವಿಸಿದ್ಧೇಶ್ವರ ಮಠ, ಬಳಗಾನೂರ ಶರಣ ಮಠದ ಬಗ್ಗೆಯು ಮುಂದಿನ ಕಂತುಗಳಲ್ಲಿ ಮಾಹಿತಿ ಚಿತ್ರರಗೊಳ್ಳಲಿದೆ ಎಂದು ತಿಳಿದುಬಂದಿದೆ.

**ಗ್ರಾಮಶಿಕ್ಷಣ ಸಮಿತಿ:** ತಾಲೂಕಿನ ವೆಸರೂರ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಪ್ರಸಕ್ತ ಸಾಲಿನ ಗ್ರಾಮಶಿಕ್ಷಣ ಸಮಿತಿಯನ್ನು ಗ್ರಾ.ಪಂ. ಅಧ್ಯಕ್ಷ ಲಕ್ಷ್ಮಣ ಬರದೂರ ಅಧ್ಯಕ್ಷತೆಯಲ್ಲಿ ಆಯ್ಕೆ ಮಾಡಲಾಯಿತು. ಅಧ್ಯಕ್ಷನಾಗಿ ರಾಮಣ್ಣ ಬುಟ್ಟಿಗ್ಯಾವರ ಕಾರ್ಯದರ್ಶಿಯಾಗಿ ಕೃಷ್ಣಪ್ಪ ಕುರಡಿಕೇರಿ, ಸಹಕಾರ್ಯದರ್ಶಿಯಾಗಿ ಕರವೀರಯ್ಯ ಹಳ್ಳಿ, ಸದಸ್ಯರಾಗಿ ಸುಲೇಮಾನ ಬಾವಾಜಿ ವಿಜಯಾ ಆನೇಶ, ಈರಣ್ಣ ಚೋಳದ, ಪರಸಗೌಡ ಪಾಟೀಲ, ರವಿ ಕಮ್ಮಾರ, ದ್ಯಾಮಣ್ಣ ಚೂರಿ, ನಿಂಗಪ್ಪ ಹಂಜಿನ, ಶ್ರೀಮತಿ ಲಿಂಬೆವ್ವ ಚಿಗರಿ, ಶ್ರೀಮತಿ ಬಾಳವ್ವ ಪಿ.ಬಿ. ನಾಯ್ಕರ, ಕಲ್ಲೆಳ ಆಯ್ಕೆಯಾಗಿದ್ದಾರೆ. ಎಸ್.ಎಸ್. ಹೋಣಿ ಕಾರ್ಯಕ್ರಮ ನಿರೂಪಿಸಿದರು, ಕೆ.ಡಿ. ಲಮಾಣಿ ವಂದಿಸಿದರು.

3,978 ಮೀಟರ್ ಎತ್ತರದ ರೋಹ್ಟಾಂಗ್ ಪಾಸ್‌ನ ಮೇಲೆ ಯುವರಾಜ್

## ಅತಿ ಎತ್ತರದ ಸ್ಥಳಕ್ಕೆ ಸೈಕಲ್ ಪ್ರವಾಸ

ಹರಿಹರ, 10- ಕಿರ್ಲೋಸ್ಕರ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸಡ ಮ್ಯಾನೇಜ್‌ಮೆಂಟ್ ಸ್ಟಡೀಸ್‌ನಲ್ಲಿ ಸೇವೆ ಸಲ್ಲಿಸುತ್ತಿರುವ ಜಿ. ಯುವರಾಜ್ ಇವರು ಆಗಸ್ಟ್ ತಿಂಗಳ 22 ರಿಂದ ಸುಮಾರು 20 ದಿವಸಗಳವರೆಗೆ ಬೈಸಿಕಲ್ ಪ್ರವಾಸ ಮಾಡಿ ದೆಹಲಿಯಿಂದ ಹರ್‍ಯಾಣ, ಪಂಜಾಬ್, ಮತ್ತು ಹಿಮಾಚಲ ಪ್ರದೇಶದ ಮಾರ್ಗವಾಗಿ ಪ್ರಪಂಚದ ಅತಿ ಎತ್ತರದ ರಸ್ತೆಯಾದ ಮನಾಲಿ-ಲೇಹ್ ರಸ್ತೆಯನ್ನು ಬಳಸಿಕೊಂಡು ಯಶಸ್ವಿಯಾಗಿ ಲೇಹ್-ಲಡಾಖ್ (ಜಮ್ಮು ಮತ್ತು ಕಾಶ್ಮೀರ) ಪ್ರವಾಸವನ್ನು ಮುಗಿಸಿಕೊಂಡು ಇತ್ತೀಚೆಗೆ ಊರಿಗೆ ಮರಳಿದರು. ಅವರನ್ನು ಕೆ.ಐ.ಎ.ಎಮ್.ಎಸ್. ಸಿಬ್ಬಂದಿ ವರ್ಗವು ಸನ್ಮಾನಿಸಿತು.

ಧಾರವಾಡದ ಕಾಸಮಸ್ ಕ್ಲಬ್ ಏರ್ಪಡಿಸಿದ್ದ ಭಾಷಣ ಸ್ಪರ್ಧೆಯಲ್ಲಿ ವಿಜೇತರಾದ ವಿಜಯಲಕ್ಷ್ಮಿ ಹಿರೇಮಠರಿಗೆ ಶ್ರೀಮತಿ ಸುಕನ್ಯಾ ಮಾರುತಿ ಫಲಕ ನೀಡಿ ಗೌರವಿಸಿದರು. ವಿ.ಡಿ. ಕಮರಡ್ಡಿ, ಡಾ. ಎ.ಇ. ಪುನೀತ್, ಸಿ.ಎಚ್. ಜೋಗಿಹಳ್ಳಿ, ಎಸ್.ಎಸ್. ಬಿರ್ಜಣ್ಣವರ ಚಿತ್ರದಲ್ಲಿದ್ದಾರೆ.

## ಭಾಷಣ ಸ್ಪರ್ಧೆ: ವಿಜಯಲಕ್ಷ್ಮಿ ಪ್ರಥಮ

ಧಾರವಾಡ, - ಇಲ್ಲಿಯ ಕಾಸ್‌ಮಸ್ ಕ್ಲಬ್ ಗಾಂಧಿ ಜಯಂತಿ ಅಂಗವಾಗಿ ಏರ್ಪಡಿಸಿದ್ದ ಭಾಷಣ ಸ್ಪರ್ಧೆಯಲ್ಲಿ ಕು. ವಿಜಯಲಕ್ಷ್ಮಿ ಹಿರೇಮಠ ವಿಶೇಷ ಪ್ರಶಸ್ತಿ ಪಡೆದರು.

ಮುಕ್ತಾಯ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿದ್ದ ಶ್ರೀಮತಿ ಸುಕನ್ಯಾ ಮಾರುತಿ ಅವರು ವಿಜಯಲಕ್ಷ್ಮಿಗೆ ಫಲಕ ನೀಡಿ ಗೌರವಿಸಿದರು.

ಗಾಂಧೀಜಿಯವರ ಆದರ್ಶಗಳನ್ನು ಯುವ ಜನತೆಯಲ್ಲಿ ತುಂಬಲು ಸಂಘ ಸಂಸ್ಥೆಗಳಿಂದ ಇಂಥ ಸ್ಪರ್ಧೆಗಳನ್ನು ಹಮ್ಮಿಕೊಳ್ಳಬೇಕೆಂದು ಸುಕನ್ಯಾಮಾರುತಿ ಕರೆ ನೀಡಿದರು.

ನ್ಯಾಯವಾದಿ ವಿ.ಡಿ. ಕಾರಮಡ್ಡಿ ಅಧ್ಯಕ್ಷತೆ ವಹಿಸಿದ್ದರು. ಸಿ.ಎಚ್. ಜೋಗಿಹಳ್ಳಿ ಸ್ವಾಗತಿಸಿದರು. ಎಸ್.ಎಸ್. ಬಿರ್ಜಣ್ಣವರ ವಂದಿಸಿದರು.

ಉದ್ಘಾಟನೆ: ಕರ್ನಾಟಕ ವಿಶ್ವವಿದ್ಯಾಲಯ ವ್ಯಾಪ್ತಿಯ ಕಾಲೇಜುಗಳ ವಿದ್ಯಾರ್ಥಿಗಳಿಗೆ ಕಾಸ್ಮಸ್ ಕ್ಲಬ್ ಏರ್ಪಡಿಸಿದ್ದ ಭಾಷಣ ಸ್ಪರ್ಧೆಯನ್ನು ಕ.ವಿ.ವಿ. ಹಿಂದಿನ ಕುಲಸಚಿವ ಡಾ. ಎ.ಇ. ಪುನೀತ್ ಉದ್ಘಾಟಿಸಿದರು.

ಉಗ್ಗಿನಕೇರಿಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಏರ್ಪಡಿಸಿದ ಚಿಗುರು ಮತ್ತು ರಸಗ್ರಹಣ ಕಾರ್ಯಕ್ರಮದಲ್ಲಿ ಎಂ.ಡಿ. ಹೊರಕೇರಿ ಉಪನ್ಯಾಸ ನೀಡುತ್ತಿರುವದು. ರಾಮು ಮೂಲಗಿ, ಜಿ.ಆರ್. ಗಜೇಂದ್ರಗಡ, ಅಕ್ಕಸಾಲಿ ಚಿತ್ರದಲ್ಲಿದ್ದಾರೆ.

## ಚಿಗುರು-ರಸಗ್ರಹಣ ಕಾರ್ಯಕ್ರಮ

ಉಗ್ಗಿನಕೇರಿ (ಕಲಘಟಗಿ) - ಮಕ್ಕಳಲ್ಲಿ ಅಡಗಿರುವ ಸುಪ್ತ ಪ್ರತಿಭೆ ಗುರ್ತಿಸಿ ಪ್ರೋತ್ಸಾಹಿಸಬೇಕೆಂದು ಪ್ರೊ. ಎಂ.ಡಿ. ಹೊರಕೇರಿ ನುಡಿದರು.

ಅವರು ಉಗ್ಗಿನಕೇರಿ ಪ್ರಾಥಮಿಕ ಶಾಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಏರ್ಪಡಿಸಿದ ಚಿಗುರು ಮತ್ತು ರಸಗ್ರಹಣ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಉಪನ್ಯಾಸ ನೀಡಿದರು. ಮುಖ್ಯ ಅತಿಥಿಗಳಾಗಿ ಜಾನಪದ ಕಲಾವಿದ ರಾಮು ಮೂಲಗಿ, ಎನ್.ಟಿ. ಹಂಗರಗಿ, ಅಕ್ಕಸಾಲಿ, ಕುರ್ತಕೋಟಿ, ವೈ.ಎಸ್. ಕದಬಾಪ್ಪ ಜಿಗಳೂರ ಆಗಮಿಸಿದ್ದರು.

ಚಿತ್ರಕಲಾ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನ ವಿತರಿಸಲಾಯಿತು.

ಜಿ.ಆರ್. ಗಜೇಂದ್ರಗಡ ಅಧ್ಯಕ್ಷತೆ ವಹಿಸಿದ್ದರು. ಬಾರಕೇರ ಕಾರ್ಯಕ್ರಮ ನಿರೂಪಿಸಿದರು.

ದಸರಾ ವಿಭಾಗಮಟ್ಟದ ಕ್ರೀಡಾಕೂಟದಲ್ಲಿ ಪ್ರಥಮ ಸ್ಥಾನ ಗಳಿಸಿರುವ ಧಾರವಾಡದ ಕರ್ನಾಟಕ ಪ್ರೌಢಶಾಲೆಯ ಜಿಮ್ನಾಸ್ಟಿಕ್ ತಂಡದೊಂದಿಗೆ ಪ್ರಾಚಾರ್ಯ ವಿ.ಕೆ. ಕಾಥವಟೆ, ಕೆ.ಬಿ. ಬೆಟಗೇರಿ, ದೈಹಿಕ ಶಿಕ್ಷಕ ಗುರುರಾಜ ಚಿತ್ರದಲ್ಲಿದ್ದಾರೆ.

## 'ಮೌಲಿಕ ಗ್ರಂಥಗಳ ಪ್ರಕಟಣೆಗೆ ನೆರವು ಅಗತ್ಯ'

ಧಾರವಾಡ, - ಮೌಲಿಕ ಗ್ರಂಥಗಳ ಪ್ರಕಟಣೆಗೆ ಧನ ಸಹಾಯ ಮಾಡಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಮೋಘ ಸೇವೆ ಸಲ್ಲಿಸುವ ಉದಾರ ಹೃದಯತೆ ಬೆಳೆಸಿಕೊಳ್ಳಬೇಕಾಗಿದೆ ಎಂದು ಕವಿ ಲಕ್ಷ್ಮಣ ಜೋಶಿ ಹೇಳಿದರು.

ತಾವು ಬರೆದ 13 ಸಾವಿರ ಪದ್ಯಗಳ ಮಹಾಭಾರತ ಕಾವ್ಯದ ಪ್ರಕಟಣೆಗೆ ಧನಸಹಾಯ ಮಾಡಿದ ದಾನಿಗಳಾದ ಶ್ರೀಮತಿ ಲಲಿತಾಂಬ ಮತ್ತು ಡಾ. ಕಾಂತಾಮಣಿ ಅವರಿಗೆ ಸತ್ಕರಿಸಿ ಜೋಶಿ ಅವರು ಮಾತನಾಡಿದರು.

ಅತ್ತಿಮಬ್ಬೆಯು ಮಹಾಕವಿ ರನ್ನನ ಗದಾಯುದ್ಧದ ಕಾವ್ಯದ ಸಾವಿರಾರು ಪ್ರತಿಗಳನ್ನು ಬರೆಯಿಸಿ ದಾನಮಾಡಿ ದಾನಚಿಂತಾಮಣಿಯಾಗಿದ್ದು, ಇತಿಹಾಸದಿಂದ ತಿಳಿಯುತ್ತೇವೆ.

ಅದರಂತೆ ಶ್ರೀ ಮನ್ಮಹಾಭಾರತ ಕಾವ್ಯದ ಹತ್ತು ಪರ್ವಗಳ ಗ್ರಂಥ ಪ್ರಕಟಣೆಗೆ ಧನಸಹಾಯ ಮಾಡಿದ ಶ್ರೀಮತಿ ಲಲಿತಾಂಬ ಅವರ ಸಾಹಿತ್ಯ ಸೇವೆ ಅಮೋಘವಾಗಿದೆ. ಅವರ ದಾನ ಇಲ್ಲದಿದ್ದರೆ ಪುಸ್ತಕ ಪ್ರಕಟವಾಗದೇ ಕತ್ತಲಲ್ಲಿ ಉಳಿಯುತ್ತಿತ್ತೆಂದು ಜೋಶಿ ಹೇಳಿದರು.

ಸತ್ಕಾರ ಸ್ವೀಕರಿಸಿದ ಶ್ರೀಮತಿ ಲಲಿತಾಂಬ ಅವರು ಮಾತನಾಡಿ 'ಕೆರೆ ನೀರು ಕೆರೆಗೆ ಚೆಲ್ಲಿ' ವರವ ಪಡೆಯಿರೋ ಎಂಬಂತೆ ದೇವರ ಹಣ ದೇವರಿಗೆ ಅರ್ಪಿಸಿದ್ದೇವೆ. ಇದರಲ್ಲಿ ತಮ್ಮ ಕೊಡುಗೆ ದೊಡ್ಡದಲ್ಲ. ಶಾಶ್ವತವಾಗಿ ಉಳಿಯುವಂತ ಮಾರ್ಗದರ್ಶನ ಮಾಡುವ ಗ್ರಂಥಗಳ ಅಗತ್ಯತೆ ಇದೆ ಎಂದರು.

ಶ್ರೀಮತಿ ಪಾಟೀಲ ಅವರು ಶ್ರೀಮತಿ ಲಲಿತಾಂಬ ಮತ್ತು ಡಾ. ಕಾಂತಾಮಣಿ ಅವರನ್ನು ಸತ್ಕರಿಸಿದರು.

## ದೇಶಿ ಸಂಗೀತಕ್ಕೆ ಆದ್ಯತೆ ನೀಡಲು ಕರೆ

ಹುಬ್ಬಳ್ಳಿ, - ದೇಶಿಯ ಸಂಗೀತಕ್ಕೆ ಹೆಚ್ಚಿನ ಆದ್ಯತೆ ನೀಡಿ, ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವಾದ ಸಂಗೀತವನ್ನು ಶ್ರೀಮಂತಗೊಳಿಸಬೇಕು ಎಂದು ಖ್ಯಾತ ಸಿತಾರವಾದಕ ಶ್ರೀನಿವಾಸ ಜೋಶಿ ನುಡಿದರು.

ಅವರು ಇತ್ತೀಚೆಗೆ ಅಕ್ಕಸಾಲಿಗರ ಓಣಿಯ ಶ್ರೀ ಕಾಳಿಕಾ ದೇವಸ್ಥಾನದ ಶ್ರೀ ಕಾಳಿಕಾ ದೇವಿ ಟ್ರಸ್ಟ್ ಕಮಿಟಿಯು ದಸರಾ ಉತ್ಸವ ನಿಮಿತ್ತ ಕಾಳಿಕಾ ದೇವಸ್ಥಾನದಲ್ಲಿ ಕಲ್ಯಾಣ ಮಂಟಪದಲ್ಲಿ ಏರ್ಪಡಿಸಿದ್ದ ಸಂಗೀತ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ದೇಶಿಯ ಸಂಗೀತದ ಬಗ್ಗೆ ಸಾರ್ವತ್ರಿಕ ಅರಿವು ಮೂಡಿಸುವ ಮೂಲಕ ಪಾಶ್ಚಿಮಾತ್ಯ ಸಂಗೀತ ಮತ್ತು ಸಂಸ್ಕೃತಿಯ ಅನುಕರಣೆಯನ್ನು ಹೋಗಲಾಡಿಸಬೇಕಾಗಿದೆ ಎಂದು ಅವರು ಒತ್ತಾಯಿಸಿದರು. ಅಧ್ಯಕ್ಷತೆಯನ್ನು ಟ್ರಸ್ಟ್ ಕಮಿಟಿ ಅಧ್ಯಕ್ಷ ಶಿವಪ್ಪ ಲಕ್ಕುಂಡಿ ವಹಿಸಿದ್ದರು.

ಪ್ರೊ. ಅಶೋಕ ಬಡಿಗೇರ, ರಾಮಾಚಾರ್ಯ ಕಡ್ಲಾಸ್ಕರ್, ನಾಗನಾಥ ಒಡೆಯರ, ಕಾಳಪ್ಪ ಬೆಳ್ಳಿಗಟ್ಟಿ, ಅನಂತ ಸೊರಟೂರ, ನಾರಾಯಣ ಕಟ್ಟಿ, ಮೋಹನ ಲಕ್ಕುಂಡಿ, ಬಾಪೂಜಿ ಕಂಚಗಾರ ಮುಂತಾದವರು ಭಾಗವಹಿಸಿದ್ದರು. ರಾಮಣ್ಣ ಕಂಚಗಾರ ಕಾರ್ಯಕ್ರಮ ನಿರೂಪಿಸಿದರು. ನಾರಾಯಣ ಅರಳಿಕಟ್ಟಿ ವಂದಿಸಿದರು.

## ಮೂರನೆ ಸಲ ರಾಜ್ಯಮಟ್ಟಕ್ಕೆ ಆಯ್ಕೆ

ಹಾವೇರಿ, - ಹಾನಗಲ್ ತಾಲೂಕಿನ ಅಕ್ಕಿಆಲೂರಿನಲ್ಲಿ ಇತ್ತೀಚೆಗೆ ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ನಡೆದ ಜಿಲ್ಲಾ ಮಟ್ಟದ ಪ್ರೌಢಶಾಲಾ ಕ್ರೀಡಾಕೂಟದಲ್ಲಿ ರಾಣೆಬೆನ್ನೂರು ತಾಲೂಕಿನ ಗ್ರಾಸಿಮ್ ಸಿರಿಗನ್ನಡ ಪ್ರೌಢಶಾಲೆ ಕವಲೆತ್ತು ಇಲ್ಲಿಯ ವಿದ್ಯಾರ್ಥಿ ಜಯಣ್ಣ ಬಿ.ಎಚ್. 100 ಹಾಗೂ 400 ಮೀ. ಓಟದಲ್ಲಿ ಪ್ರಥಮ ಸ್ಥಾನ ಪಡೆದು ರಾಜ್ಯಮಟ್ಟಕ್ಕೆ ಆಯ್ಕೆಯಾಗಿದ್ದಾನೆ. ಇದು ವಿದ್ಯಾರ್ಥಿಯ ಸತತ ಮೂರನೇ ವರ್ಷದ ಸಾಧನೆಯಾಗಿದೆ ಎಂದು ಶಾಲೆಯ ಪ್ರಕಟಣೆ ತಿಳಿಸಿದೆ.

## ಚಿತ್ರಕಲಾ ಸ್ಪರ್ಧೆಯಲ್ಲಿ ಪ್ರಥಮ

ಶಿರಹಟ್ಟಿ, - ವನ್ಯಪ್ರಾಣಿ ಸಪ್ತಾಹದ ಅಂಗವಾಗಿ ಗದಗ ಅರಣ್ಯ ಇಲಾಖೆ ವತಿಯಿಂದ ಬಿಂಕದಕಟ್ಟಿ ಪ್ರಾಣಿ ಸಂಗ್ರಹಾಲಯದಲ್ಲಿ ಇತ್ತೀಚೆಗೆ ಗದಗ ಜಿಲ್ಲಾ ಮಟ್ಟದ ಚಿತ್ರಕಲಾ ಸ್ಪರ್ಧೆ ನಡೆಯಿತು.

ಶಿರಹಟ್ಟಿ ವಿದ್ಯಾದಾನ ಶಿಕ್ಷಣ ಸಮಿತಿಯ ಕಾನ್ವೆಂಟ ಮಾದರಿಯ ಕನ್ನಡ ಮಾಧ್ಯಮ ಶಾಲೆಯ ವಿದ್ಯಾರ್ಥಿನಿ ಸುಮಾ ಮುಧೋಳಕರ ಪ್ರಥಮ ಹಾಗೂ ಅದೇ ಶಾಲೆಯ ಕೀರ್ತಿಕುಮಾರ ಅಂಗಡಿ ನಾಲ್ಕನೇ ಸ್ಥಾನ ಪಡೆದುಕೊಂಡಿದ್ದಾರೆ.

ವಿಜೇತರಿಗೆ ಶಾಲೆಯ ಮುಖ್ಯಾಧ್ಯಾಪಕ ಎಚ್.ಐ. ಮಕಾನದಾರ ಹಾಗೂ ಸಿಬ್ಬಂದಿಗಳು ಅಭಿನಂದನೆ ಸಲ್ಲಿಸಿದ್ದಾರೆ.

## ಕ್ರೀಡಾಕೂಟದಲ್ಲಿ ಪ್ರಥಮಸ್ಥಾನ

ಸಂಶಿ, - ಸ್ಥಳೀಯ ಶ್ರೀ ಜಗದ್ಗುರು ಫಕೀರ ಶಿವಯೋಗೀಶ್ವರ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿನಿಯಾದ ಎಸ್.ಎಂ. ಸಂದಿಮನಿ ಜಿಲ್ಲಾಮಟ್ಟದ ಕ್ರೀಡಾಕೂಟದಲ್ಲಿ ವಿದ್ಯಾರ್ಥಿನಿಯರ ವಿಭಾಗದಲ್ಲಿ ಪ್ರಥಮ ಸ್ಥಾನ ಪಡೆದು ರಾಜ್ಯಮಟ್ಟಕ್ಕೆ ಆಯ್ಕೆಯಾಗಿದ್ದಾಳೆ. ವಿದ್ಯಾರ್ಥಿನಿಗೆ, ಮುಖ್ಯಾಧ್ಯಾಪಕರಾದ ವಿ.ಸಿ. ಪಾಟೀಲ ಹಾಗೂ ಶಿಕ್ಷಕ ವೃಂದ ಅಭಿನಂದಿಸಿದೆ.

ಧಾರವಾಡದ ವಾಲ್ಮಿಯಲ್ಲಿ ಈಚೆಗೆ ನಡೆದ ಎನ್‌ಸಿಸಿ ಕ್ಯಾಂಪ್‌ನ ಹೈಸ್ಕೂಲ್ ವಿಭಾಗದ ಕೆಡೆಟ್ಸ್‌ಗಳಿಗೆ ಏರ್ಪಡಿಸಲಾಗಿದ್ದ ಡ್ರಿಲ್, ಕ್ರಾಸ್ ಕಂಟ್ರಿ, ಭಾವಗೀತೆಗಳಲ್ಲಿ ಪ್ರಥಮ ಸ್ಥಾನ ಪಡೆದ ಕೆ.ಇ. ಬೋರ್ಡ್‌ನ ಕೆಡೆಟ್‌ಗಳು ಮತ್ತು ಸಂಸ್ಥೆ ಅಧ್ಯಕ್ಷರು, ಶಿಕ್ಷಕರು.

## ವಾಲ್ಮಿ ಆವರಣದಲ್ಲಿ ಎನ್‌ಸಿಸಿ ಶಿಬಿರ

ಧಾರವಾಡ, - ಇಲ್ಲಿಯ 24ನೇ ಕರ್ನಾಟಕ ಎನ್‌ಸಿಸಿ ಬಟಾಲಿಯನ್ ಶಿಬಿರದ ಆಶ್ರಯದಲ್ಲಿ ಎನ್‌ಸಿಸಿ ಸಂಯುಕ್ತ ವಾರ್ಷಿಕ ಶಿಬಿರವು ವಾಲ್ಮಿಯಲ್ಲಿ ಇತ್ತೀಚೆಗೆ ಲೆ.ಕ. ವಿ.ಕೆ. ಸೇಠ್ ಅವರ ಮಾರ್ಗದರ್ಶನದಲ್ಲಿ ಜರುಗಿತು.

ಸೀನಿಯರ್ ವಿಭಾಗದ 425, ಜ್ಯೂನಿಯರ್ ವಿಭಾಗದ 275 ಕೆಡೆಟ್‌ಗಳು ಶಿಬಿರದಲ್ಲಿ ಭಾಗವಹಿಸಿದ್ದರು.

ಕೆಡೆಟ್‌ಗಳಿಗೆ, ಡ್ರಿಲ್, ನಕ್ಷೆಯ ಅಭ್ಯಾಸ, ರೈಫಲ್ ತರಬೇತಿ, ಯೋಗಾಸನ, ಸಮೂಹ ಜೀವನ ತರಬೇತಿ, ಮುಂದಾಳುತನ, ಗಸ್ತು ತಿರುಗುವಿಕೆ ತರಬೇತಿ ನೀಡುವದರೊಂದಿಗೆ ರಕ್ತದಾನ ಶಿಬಿರ ಸಂಘಟಿಸಲಾಗಿತ್ತು.

ಶಿಬಿರದಲ್ಲಿ ಕೆಡೆಟ್‌ಗಳಿಗಾಗಿ ಹಲವಾರು ಸ್ಪರ್ಧೆಗಳನ್ನು ಸಂಘಟಿಸಲಾಗಿತ್ತು, ಕೆ.ಇ. ಬೋರ್ಡ್‌ನ ಪ್ರೌಢಶಾಲೆಯ 61ನೇ ದಳದ ಕೆಡೆಟ್‌ಗಳು ಡ್ರಿಲ್, ಕ್ರಾಸ್ ಕಂಟ್ರಿ ಓಟ, ಭಾವಗೀತ (ಸಮೂಹ), ಭಾವಗೀತೆ (ವೈಯಕ್ತಿಕ) ಸ್ಪರ್ಧೆಗಳಲ್ಲಿ ಪ್ರಥಮ, ಭಾಷಣ ಸ್ಪರ್ಧೆಯಲ್ಲಿ ದ್ವಿತೀಯ ಸ್ಥಾನ ಪಡೆದರು.

ಕುಂದಗೋಳ ತಾಲೂಕಿನ ಕೊಡ್ಲಿವಾಡ ಗ್ರಾಮದ ಚೆನ್ನವೀರಯ್ಯ ಅಕ್ಕಿಗುಂದಮಠ ಅವರು ಧಾರವಾಡ ಜಿ.ಪಂ. ಅಧ್ಯಕ್ಷ ಸಿ.ಎಸ್. ಶ್ಯಾಗೋಟಿ ಅವರನ್ನು ಸನ್ಮಾನಿಸುತ್ತಿರುವುದು. ವಿ.ಎಚ್. ರೊಟ್ಟಿಗವಾಡ ಚಿತ್ರದಲ್ಲಿ ಇದ್ದಾರೆ

## ಸೌಲಭ್ಯಗಳ ಸದುಪಯೋಗಕ್ಕೆ ಕರೆ

ಕುಂದಗೋಳ, - ಜನರು ಸರಕಾರದ ಸೌಲಭ್ಯಗಳನ್ನು ಸದುಪಯೋಗಪಡಿಸಿಕೊಂಡು ಅಭಿವೃದ್ಧಿ ಹೊಂದಬೇಕೆಂದು ಧಾರವಾಡ ಜಿ.ಪಂ. ಅಧ್ಯಕ್ಷ ಸಿ.ಎಸ್. ಶ್ಯಾಗೋಟಿ ಕರೆ ನೀಡಿದರು.

ತಾಲೂಕಿನ ಕೊಡ್ಲಿವಾಡ ಗ್ರಾಮದಲ್ಲಿ ಏರ್ಪಡಿಸಲಾಗಿದ್ದ ಸತ್ಕಾರ ಸ್ವೀಕರಿಸಿ ಮಾತನಾಡುತ್ತಿದ್ದರು. ಕುಡಿಯುವ ನೀರು, ರಸ್ತೆ ಸುಧಾರಣೆ ಹಾಗೂ ಗ್ರಾಮೀಣ ಅಭಿವೃದ್ಧಿಗೆ ಪ್ರಾಮಾಣಿಕ ಪ್ರಯತ್ನ ಮಾಡುವುದಾಗಿ ಭರವಸೆ ನೀಡಿದರು.

ರಾಜ್ಯ ಕೆ.ಪಿ.ಸಿ.ಸಿ.ಐ.ನ ಜಂಟಿ ಕಾರ್ಯದರ್ಶಿ ಗೋವಿಂದಪ್ಪ ಜುಟ್ಟಲ ಅಧ್ಯಕ್ಷತೆ ವಹಿಸಿದ್ದರು. ಚನ್ನವೀರಯ್ಯ ಅಕ್ಕಿಗೊಂಡಮಠ ಸಾನಿಧ್ಯ ವಹಿಸಿದ್ದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಹಾಯಕ ನಿರ್ದೇಶಕ ಬಿ.ಡಿ ಹಿರೇಗೌಡರ, ಶಂಕ್ರಣ್ಣ ಮೊರಬದ, ವೈ.ಜಿ. ಮಂಟೂರ, ಎಸ್.ಎಫ್. ಬಿಳಿಯಲಿ, ಶಿವಾನಂದ ಬಿಚನಾಳ ಮಾತನಾಡಿದರು.

ಹನಮಂತಪ್ಪ ಮಾಡಳ್ಳಿ, ಸುಭಾಶ್ಚಂದ್ರ ಮಾಡಳ್ಳಿ, ವೀರಪ್ಪ ಯಂಕಮ್ಮನವರ, ಪರಯ್ಯ ಹಿರೇಮಠ, ಕಲ್ಲಪ್ಪ ಶಿರಗಾರ, ಎಚ್. ಹಿರೇಗೌಡರ, ಕುರಹಟ್ಟಿ ಉಪಸ್ಥಿತರಿದ್ದರು. ಎಚ್.ವಿ. ಮಾಡಳ್ಳಿ ಸ್ವಾಗತಿಸಿದರು. ಎ.ಎಚ್. ರೊಟ್ಟಿಗವಾಡ ಕಾರ್ಯಕ್ರಮ ನಿರೂಪಿಸಿ, ವಂದಿಸಿದರು.

## ಬೆಳವಣಿಕಿಯಲ್ಲಿ ದಸರಾ ಉತ್ಸವ

ಬೆಳವಣಿಕಿ (ರೋಣ), - ಸ್ಥಳೀಯ ಮೈಲಾರಲಿಂಗೇಶ್ವರ ದೇವಸ್ಥಾನದಿಂದ ಊರಿನ ನಾಗರಿಕರು ಕೂಡಿಕೊಂಡು ಪ್ರತಿ ವರ್ಷದಂತೆ ಈ ವರ್ಷ ಪಲ್ಲಕ್ಕಿ ಉತ್ಸವ, ಕುದುರೆಗಳ ಮೆರವಣಿಗೆ ನಡೆಸಿದರು.

ದಸರಾ ಉತ್ಸವಕ್ಕೆ ದೀವಟಿಗೆಗಳನ್ನು ಹಚ್ಚಿ ದೇವರಿಗೆ ಬೆಳಗಲಾಯಿತು. ಸಂಜೆ ಬನ್ನಿಮುಡಿಯುವ ಕಾರ್ಯ ಜರುಗಿತು.

## ದೇಶಭಕ್ತಿ, ಜಾನಪದ ಹಾಡುಗಳ ತರಬೇತಿ

ಹಾವೇರಿ, - ಜಿಲ್ಲೆಯ ಗುತ್ತಲ ಗ್ರಾಮದಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ ದೇಶಭಕ್ತಿ ಗೀತೆ ಹಾಗೂ ಜಾನಪದ ಹಾಡುಗಳ ಎರಡು ದಿನಗಳ ತರಬೇತಿ ಕಾರ್ಯಕ್ರಮ ಏರ್ಪಡಿಸಲಾಗಿದೆ. ಜಿಲ್ಲಾ ಮಕ್ಕಳ ಸಾಹಿತ್ಯ ವೇದಿಕೆ, ಗುತ್ತಲ ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಬೆಳವಿಗಿ ಸರಕಾರಿ ಆಯುರ್ವೇದಿಕ್ ಆಸ್ಪತ್ರೆ ಇವುಗಳ ಸಂಯುಕ್ತಾಶ್ರಯದಲ್ಲಿ ಈ ತರಬೇತಿ ನಡೆಯಲಿದೆ. ಆಸಕ್ತರು ಡಾ. ಅಶೋಕ ಮತ್ತಿಗಟ್ಟಿ ಗವಳಿಗಲ್ಲಿ, ವ್ಯವಸಾಯ ಸಹಕಾರಿ ಸಂಘದ ಹತ್ತಿರ, ಗುತ್ತಲ ಇವರಲ್ಲಿ ಬರುವ ದಿ. 25 ರೊಳಗೆ ಹೆಸರು ನೊಂದಾಯಿಸಿಕೊಳ್ಳಬೇಕೆಂದು ಜೆ.ಎಂ. ಮಠದ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

## ಆಧುನಿಕ ಕಂಪ್ಯೂಟರ್ ಶಿಕ್ಷಣ

( ಮೊದಲ ಪುಟದಿಂದ )

ಕಂಪ್ಯೂಟರ್ ಆರಂಭಿಕ ಶಿಕ್ಷಣದಿಂದ ಪ್ರೊಗ್ರಾಮಿಂಗ್, ಸಾಫ್ಟವೇರ್ ಹಾಗೂ ಇ-ಕಾಮರ್ಸ್‌ಗಳನ್ನು ಇಲ್ಲಿ ಕಲಿಸಲಾಗುತ್ತಿದೆ. ಅಲ್ಲದೇ ವಿವಿಧ ವಾಣಿಜ್ಯೋದ್ಯಮ ಸಂಸ್ಥೆಗಳು, ಬ್ಯಾಂಕು, ಆಸ್ಪತ್ರೆಗಳು ಹಾಗೂ ಎಲ್ಲ ತರಹದ ವಾಣಿಜ್ಯ ಮಳಿಗೆ, ಅಟೋಮೇಶನ್‌ಗಳಿಗೆ ಸಾಫ್ಟವೇರ್ ತಯಾರಿಸಿ ಕೊಡಲಾಗುತ್ತಿದೆ.

ಕೇಂದ್ರದ ಹೆಗ್ಗಳಿಕೆ ಎಂದರೆ ಕಲಾ ವಿಷಯದಲ್ಲಿ ತರಬೇತಿ, ಕಲಾ ಶಾಲೆಗಳಲ್ಲಿ ಐದು ವರ್ಷ ಕಲಿಯಬೇಕಾದುದನ್ನು ಇಲ್ಲಿ ಆರೇ ತಿಂಗಳಲ್ಲಿ ಕಲಿಯಬಹುದು. ವೆಬ್ ಡಿಸೈನ್ ಮಾಡುವದು, ಅನಿಮೇಶನ್ ತಂತ್ರಗಳ ಶಿಕ್ಷಣ ಪಡೆಯಬಹುದು, ಥ್ರೀಡಿ ಸ್ಟುಡಿಯೋ ಇಲಾಸ್ಟಿಕ್ ರಿಯಾಲಿಟಿ, ಅಡೋಬ್ ಪ್ರೀಮಿಯರ್‌ನಂಥ ಅತ್ಯಾಧುನಿಕ ವಿಷಯಗಳನ್ನು ಇಲ್ಲಿ ಹೇಳಿಕೊಡಲಾಗುತ್ತಿದೆ. ಶೀಘ್ರದಲ್ಲಿಯೇ ಫೋಟೋಗ್ರಾಫಿ ಕುರಿತು ಕೂಡ ಇಲ್ಲಿ ತರಬೇತಿ ಆರಂಭವಾಗಲಿದೆ.

ಕಂಪನಿ ಇದಲ್ಲದೇ ಸಾಮಾಜಿಕ ಸೇವೆಯತ್ತಲೂ ಗಮನ ನೀಡಿದೆ. ಸರ್ಕಾರಿ ಶಾಲೆಗಳ ವಿದ್ಯಾರ್ಥಿಗಳಿಗೆ ಉಚಿತ ಕಂಪ್ಯೂಟರ್ ತರಬೇತಿ ನೀಡುವ ಯೋಜನೆ ಹಮ್ಮಿಕೊಂಡಿದೆ. ಮೊದಲ ಕಾರ್ಯಕ್ರಮವಾಗಿ ವಿಶ್ವೇಶ್ವರನಗರದ ವಿದ್ಯಾನಂದ ಬಾಲಕಿಯರ ಶಾಲೆ ನಂ. 13ರ ಮಕ್ಕಳಿಗೆ ತರಬೇತಿ ನೀಡಲಾಗುತ್ತಿದೆ. ಆರಂಭಿಕ ಹಂತವಾಗಿ ಆ ಶಾಲೆಯ 10 ಶಿಕ್ಷಕರು ಕೇಂದ್ರದಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ರೌಂಡ್ ಟೇಬಲ್ ಸಹಕಾರ ನೀಡಿದೆ. ಇಂಥ ಸೇವಾ ಸಂಸ್ಥೆಗಳು ಮುಂದೆ ಬಂದರೆ ಅವರ ಸಹಯೋಗದೊಡನೆ ಉಳಿದ ಶಾಲೆಗಳಿಗೂ ಈ ಯೋಜನೆ ವಿಸ್ತರಿಸಲಾಗುವುದು ಎಂದು ಡಾ. ದುಗಾಣಿ ಹೇಳಿದರು.

ಕಂಪ್ಯೂಟರ್ ಕೋರ್ಸುಗಳನ್ನು ಕಲಿಯಲು ಕೇಂದ್ರದಲ್ಲಿ ಶುಲ್ಕ ನಿಗದಿ ಮಾಡಲಾಗಿಲ್ಲ, ಪ್ರತಿಭಾವಂತರಿದ್ದು, ಕಲಿಯಲು ಹಣದ ಅಡಚಣೆ ಇರುವ ವಿದ್ಯಾರ್ಥಿಗಳಿಗೆ ಶುಲ್ಕದಲ್ಲಿ ರಿಯಾಯಿತಿ ನೀಡಲಾಗುವುದು ಎಂದವರು ವಿವರಿಸಿದರು.

ಕೇಂದ್ರದ ವಿವಿಧ ವಿಭಾಗಗಳಿಗೆ ಆಕರ್ಷಕ ಹೆಸರುಗಳನ್ನು ಇಟ್ಟಿದ್ದಾರೆ. ಕಂಪ್ಯೂಟರ್ ಲ್ಯಾಬ್‌ಗೆ ಗೆಲಾಕ್ಸಿ, ದುಗಾಣಿಯವರ ಕೋಣೆಗೆ ಸೂರ್ಯ, ಸೆಂಟರ್ ಮ್ಯಾನೇಜರ್ ಕಚೇರಿಗೆ ಬುಧ ಹೀಗೆ....

ಉತ್ಸಾಹಿ ಇಂಜಿನಿಯರ್ ವೈದ್ಯನಾಥನ್ ಅವರು ಈ ಕೇಂದ್ರದ ಮ್ಯಾನೇಜರ್ ಆಗಿದ್ದು, ಅಹ್ಮದಾಬಾದಿನ ಪ್ರತಿಭಾವಂತ ಇಂಜಿನಿಯರ್ ಸಂಜೀವ ಪಾಟೋಳೆ, ದತ್ತಾತ್ರೇಯ ಕುಲಕರ್ಣಿ, ಶೇಷಾಚಲ ಪಾಟೀಲ, ಮಹೇಶ ಹೊಂಡದಕಟ್ಟಿ, ಪ್ರಶಾಂತ ಮಹೇಂದ್ರಕರ, ಭಾರತಿ ಅರಮನಿ, ಭರತ್ ಫ್ಯಾಕಲ್ಟಿ ಸದಸ್ಯರಾಗಿದ್ದಾರೆ. ರವೀಂದ್ರ (ಫೈನ್ ಆರ್ಟ್), ವೀರೇಂದ್ರ (ಕಮರ್ಶಿಯಲ್ ಆರ್ಟ್), ಬಸವರಾಜ ಪಾಟೀಲ (ಆಟೋ ಕ್ಯಾಡ್), ನಿರಂಜನ ಹಿರೇಮಠ (ಟ್ಯಾಲಿ) ಅವರೂ ಕೇಂದ್ರದ ಶಿಕ್ಷಕರಾಗಿದ್ದಾರೆ.

ಮಹತ್ವಾಕಾಂಕ್ಷೆ ಹಾಗೂ ಏನಾದರೂ ಸಾಧಿಸಬೇಕು ಎಂಬ ಇಚ್ಛೆ ಇದ್ದವರು ಈ ಕೇಂದ್ರ ಸೇರಿ ಶಿಕ್ಷಣ ಪಡೆಯಬಹುದಾಗಿದೆ.

-ವಿಶ್ವನಾಥ ಕುಲಕರ್ಣಿ

## 'ಡೋಲಬಾಜೆ' ದಾಂಡಿಯಾ ನೃತ್ಯ

( ಮೊದಲನೇ ಪುಟದಿಂದ )

ಸಂಘಟಕರಾದ ಆಕ್ಸಿಸ್ ಕಂಪನಿಯ ಮುಖ್ಯ ಸಮನ್ವಯಾಧಿಕಾರಿ ಅಜಯ ಹಾಂಡಾ, ಇತರ ಅಧಿಕಾರಿಗಳಾದ ಜಸಪಾಲ ಕೊಹ್ಲಿ, ಸಂಜಯ ಮಾಪಿನಕುರ್ವೆ, ವಿಜಯ ಧಿಮನ್, ಶಬ್ಬೀರ ಮಗರ್ ಧರಿಸಿದ್ದ ಒಂದೇ ತರಹದ ಡ್ರೆಸ್ ಗಮನ ಸೆಳೆಯಿತು.

ಕಾರ್ಯಕ್ರಮ ಯಶಸ್ವಿಯಾಗಿ ಶಾಂತಿಯುತವಾಗಿ ಪೂರ್ಣಗೊಂಡಿದ್ದರಿಂದ ಖುಶಿ ಮೂಡ್‌ದಲ್ಲಿದ್ದ ಅಜಯ ಹಾಂಡಾ ಎಲ್ಲರಿಗೂ ಕೃತಜ್ಞತೆ ಸಲ್ಲಿಸಿದರು.

ಸುಮಾರು ಒಂದು ಸಾವಿರ ಜನರು ಭಾಗವಹಿಸಿದ್ದ ಕಾರ್ಯಕ್ರಮ ಸಂಜೆಯಿಂದ ಮಧ್ಯರಾತ್ರಿಯವರೆಗೂ ನಡೆಯಿತು. ವಿವಿಧ ಹಾಡುಗಳ ರಿಮಿಕ್ಸಿಂಗ್ ನರ್ತಕರಿಗೆ ಹೊಸದಾಗಿ ಹುರುಪು ಕೊಡುತ್ತಿತ್ತು, ಸಾಂಪ್ರದಾಯಿಕ ದಾಂಡಿಯಾ ವೇಷ ಅಲ್ಲದೇ ಸೂಟಿನ ಮೇಲೆ ರುಮಾಲು ಸುತ್ತಿದವರೂ, ಹೊಸ ಬಗೆಯ ಸಲ್ವಾರ್‌ಕಮೀಜ್ ಧರಿಸಿದವರೂ, ಪೈಜಾಮ್ ಜುಬ್ಬ, ಜೀನ್ಸ್, ಟೀಶರ್ಟ್ ಹಾಕಿದವರೂ ಅಲ್ಲಿ ಸೇರಿದ್ದರು. ಅವಳಿನಗರದಲ್ಲಿ ಆಧುನಿಕ ಫ್ಯಾಷನ್ ಹೇಗಿದೆ ಎಂಬುದನ್ನು ಅಲ್ಲಿ ನೋಡಬಹುದಾಗಿತ್ತು.

ಬಿಡಿಕೆ ಕಂಪನಿಯ ಭರತ ಖಿಮಜಿ ಅವರು ಕಾರ್ಯಕ್ರಮಕ್ಕೆ ಅತಿಥಿಗಳಾಗಿದ್ದ ಅವಳಿನಗರ ಪೊಲೀಸ್ ಕಮಿಶನರ್ ಧರ್ಮಪಾಲ ನೇಗಿ ಅವರನ್ನು ಸ್ವಾಗತಿಸಿದರು. ಡಿ.ಸಿ.ಪಿ. ಟಿ.ಆರ್. ಸುರೇಶ, ಎ.ಸಿ.ಪಿ.ಗಳಾದ ಬಿ.ಬಿ. ಪಾಟೀಲ, ಬಸವರಾಜ ಮಾಲಗತ್ತಿ, ಸಂಸದ ವಿಜಯ ಸಂಕೇಶ್ವರ, ಬಿಡಿಕೆ ಕಂಪನಿ ಅಧಿಕಾರಿ ಪಂಕಜ ಮುನಾವರ ಮೊದಲಾದ ಗಣ್ಯರು ಭಾಗವಹಿಸಿದ್ದರು.

ಸಚಿನ್ ಖಿಮಜಿ ಹಾಗೂ ಶ್ರೀಮತಿ ಮುದಿತಾ ಖಿಮಜಿ ಪ್ರಾಯೋಜಕರಿಗೆ ಪುಷ್ಪಗುಚ್ಛ ನೀಡಿ ಗೌರವಿಸಿದರು. ಶ್ರೀಮತಿ ಅಸಾವರಿ ಕಾಟಕರ, ಚೇತನ ಪುನೀತ್ ಕಾರ್ಯಕ್ರಮ ನಿರ್ವಹಿಸಿದರು.

ಭರತ ಖಿಮಜಿ ಅವರು ಪೋಲೀಸ್ ಕಮೀಷನರ್ ಧರ್ಮಪಾಲ ನೇಗಿ ಅವರಿಗೆ ಪುಷ್ಪಗುಚ್ಛ ನೀಡಿದರು. ಚೇತನ ಪುನಿತ, ಸಚಿನ್ ಖಿಮಜಿ, ಶ್ರೀಮತಿ ಮುದಿತಾ ಖಿಮಜಿ, ಶ್ರೀಮತಿ ಅಸಾವರಿ ಕಾಟಕರ ಚಿತ್ರದಲ್ಲಿದ್ದಾರೆ.

## ಅಪರೂಪದ ಮೆಣಸಿನ ಗಿಡ

( ಮೊದಲ ಪುಟದಿಂದ )

ತೋಟದ ಎಲೆಬಳ್ಳಿಯ ಮಡುವಿನಲ್ಲಿ ಕಳೆದ ಆರು ತಿಂಗಳ ಹಿಂದೆ ಪಕ್ಕದ ಚಂದ್ರಾಪುರ, ಚೌಡಯ್ಯದಾನಪುರದಲ್ಲಿ ಸೆಗಣಿ ಗೊಬ್ಬರವನ್ನು ತಂದು ಹಾಕಿದ್ದರಂತೆ ಅದರಿಂದಲೇ ಒಂದು ಮಡಿಯಲ್ಲಿ ಈ ಮೆಣಸಿನ ಗಿಡ ಬೆಳೆದಿದ್ದು ಅವರಿಗೆ ಗೊತ್ತಿಲ್ಲವಂತೆ. ಕನಿಷ್ಠ ನಾಲ್ಕು ಅಡಿ ಎತ್ತರಕ್ಕೆ ಬೆಳೆದು ಕಾಯಿ ಬಿಡಲು ಆರಂಭಿಸಿದಾಗ ಅದಕ್ಕೆ ನೀರು, ಗೊಬ್ಬರ ಹಾಕಿ ಜೋಪಾನ ಮಾಡುತ್ತಾ ಬಂದಾಗ ಇದೀಗ ಗರಿಷ್ಠ ತನಗಿಂತಲೂ ಮೂರು ಪಟ್ಟು ಎತ್ತರವಾಗಿ ಬೆಳೆದಿದ್ದನ್ನು ಕಂಡು ಹುಬ್ಬೇರಿಸುತ್ತಾನೆ. ದಿನನಿತ್ಯ ನೂರಾರು ಜನರು ಈ ಗಿಡವನ್ನು ನೋಡಲು ಬರುತ್ತಿರುವುದು ವಿಶೇಷವಾಗಿದ್ದರೂ ಸಹ ಸಂಬಂಧಿಸಿದ ಕೃಷಿ ಇಲಾಖೆಯು, ಸಂಶೋಧಕರು, ಬಂದಿಲ್ಲವಂತೆ.

15 ಅಡಿ ಎತ್ತರವಾಗಿ ಬೆಳೆದರೂ ಸಹ ಸಾಮಾನ್ಯ ಮೆಣಸಿನಗಿಡದಂತೆಯೇ ಅದರ ಎಲೆ, ಹೂವು, ಕಾಂಡವು ಇದೆ. ಕಾಯಿಯ ರುಚಿಯು ಖಾರ ಸ್ವಲ್ಪ ಜಾಸ್ತಿಯೇ ಇದೆ ಎಂಬುದು ರೈತರ ಅನುಭವ.

ಈಗಾಗಲೇ ಈ ಗಿಡದಿಂದ ಕಾಯಿ ಹರಿಯಲು, ಮೇಲ್ನೋಟ ನೋಡಲು ಒಂದು ಏಣಿಯನ್ನೇ ನಿರ್ಮಿಸಿದ್ದಾರೆ. ಇದರಿಂದ ಈಗಾಗಲೇ ಸುಮಾರು 5 ಕೆ.ಜಿ. ಯಷ್ಟು ದಪ್ಪನಾದ ಮೆಣಸಿನಕಾಯಿಯನ್ನು ಹರಿದಿದ್ದಾರಂತೆ ಇದೀಗ ಕೆಂಪು ಹಣ್ಣಿಗೆ ಮುಂದಾಗಿದೆ. ನೋಡಲು ಬಂದವರು ಕೈಯಲ್ಲೆರಡು ಕಾಯಿಗಳನ್ನು ಒಯ್ಯುತ್ತಾರೆ ಎಂದು ರೈತ ಹೇಳುವುದರ ಜೊತೆಗೆ ಇದರಂತೆಯೇ ಇನ್ನು ನಾಲ್ಕು ಬೇರೆ ಗಿಡಗಳಿವೆ. ಆದರೆ ಅವುಗಳ ಗರಿಷ್ಠ ಎತ್ತರ ನಾಲ್ಕು ಅಡಿಗಳಾಗಿವೆ ಎಂದು ಹೇಳುತ್ತಾರೆ.

ಈ ಗಿಡವನ್ನು ಸಂಶೋಧಿಸಿ ಬೆಳೆಸಿ ಬೀಜ ಸಂಗ್ರಹಿಸಲು ಕೆಲ ಬೀಜ ಕಂಪನಿಗಳು ದಾಪುಗಾಲು ಹಾಕಲು ಯತ್ನಿಸುತ್ತಿರುವುದು ಕಂಡು ಬರುತ್ತಿದೆ. ಅಪರೂಪದ ಗಿಡದ ಹಿನ್ನೆಲೆ ಸಂಶೋಧನೆಗೆ ಸಂಬಂಧಿಸಿದ ಅಧಿಕಾರಿಗಳು ಮುಂದಾದರೆ ಮೆಣಸಿನ ಕೃಷಿಯಲ್ಲಿ ಹೊಸ ತಳಿ ಆರಂಭವಾಗಬಹುದಲ್ಲವೇ?

-ಎಂ. ಚಿರಂಜೀವಿ

## ಧಾರವಾಡದಲ್ಲಿ ಸಹಸ್ರಮಾನದ ಕೃಷಿಮೇಳ

( ಮೊದಲನೇ ಪುಟದಿಂದ )

ಸುಧಾರಿತ ಪಶುಪಾಲನೆ ಕುರಿತು ಈ ಕೃಷಿ ವಿಶ್ವವಿದ್ಯಾಲಯವು, ಹೊಸ ಹೊಸ ಅವಿಷ್ಕಾರ ಮಾಡುತ್ತ ಬಂದಿದೆ. ಅವುಗಳಲ್ಲಿ ಹೈನುಗಾರಿಕೆ, ಪಶು ಪೋಷಣೆ, ಮೇವಿನ ಬೆಳೆಗಳು ಹಾಗೂ ಸಂಗ್ರಹಣೆ, ಜಾನುವಾರುಗಳ ರೋಗಗಳು ಹಾಗೂ ಪ್ರಥಮೋಪಚಾರ, ಎತ್ತುಗಳ ನಿರ್ವಹಣೆ, ಕುರಿ ಸಾಕಾಣಿಕೆ, ಆಡು ಸಾಕಾಣಿಕೆ, ಮೊಲ ಸಾಕಾಣಿಕೆ, ಕೋಳಿ ಸಾಕಾಣಿಕೆ, ಪಶುಪಾಲನಾ ತರಬೇತಿ ಹಾಗೂ ಮಾರಾಟ ಕೇಂದ್ರಗಳು ರೈತರು ಈ ವಿಷಯ ಕುರಿತು ಕೃಷಿ ಮೇಳದಲ್ಲಿ ತಿಳಿದುಕೊಳ್ಳಬಹುದು.

ಕೃಷಿ ಮೇಳದಲ್ಲಿ ಕೃಷಿಗೆ ಸಂಬಂಧಿಸಿದ, ಟ್ರ್ಯಾಕ್ಟರ್‌ಗಳ ಬಳಕೆ, ಹೊಸ ಬಗೆಯ ಕೃಷಿ ಉಪಕರಣಗಳು, ರಾಸಾಯನಿಕ ಗೊಬ್ಬರಗಳು ಕೃಷಿಗೆ ಸಂಬಂಧಿಸಿದ ಹಲವಾರು ಮಳಿಗೆಗಳನ್ನು ರೈತರು ನೋಡಬಹುದು.

ರೈತರಿಗಾಗಿ ಪ್ರತಿದಿನ ಮನರಂಜನೆ ಕಾರ್ಯಕ್ರಮಗಳು ಜರುಗುತ್ತವೆ. ಸಣ್ಣ ನಾಟಕಗಳು, ಹಂತಿ ಪದ, ಗೀಗಿ ಪದ, ಡೊಳ್ಳು, ಕುಣಿತ, ಹೆಜ್ಜೆ ಮೇಳ ಮುಂತಾದ ಮನರಂಜನೆ ಕಾರ್ಯಕ್ರಮವನ್ನು ರೈತರು ವೀಕ್ಷಿಸಿ ಆನಂದಿಸಬಹುದು.

**ಪಾಲ್ಗೊಳ್ಳುವ ಸಂಸ್ಥೆಗಳು:** ವಿವಿಧ ಗೊಬ್ಬರ, ಕ್ರಿಮಿನಾಶಕ, ಕೃಷಿ ಯಂತ್ರೋಪಕರಣ ತಯಾರಿಕಾ ಘಟಕಗಳು, ಬೀಜೋತ್ಪಾದನಾ ಸಂಘ ಸಂಸ್ಥೆಗಳು ಮಳಿಗೆಗಳನ್ನು ತೆರೆದು ತಮ್ಮ ತಮ್ಮ ಉತ್ಪನ್ನಗಳ ಪ್ರದರ್ಶನ ಮಾಹಿತಿ ನೀಡುತ್ತವೆ. ಅಲ್ಲದೆ ಸರಕಾರದ ಅಭಿವೃದ್ಧಿ ಇಲಾಖೆಗಳಾದ ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ರೇಷ್ಮೆ ಅರಣ್ಯ, ಮೀನುಗಾರಿಕೆ, ಗುಡಿ ಕೈಗಾರಿಕೆ, ಹಣಕಾಸು ಸಂಸ್ಥೆಗಳು ಕೂಡಾ ಭಾಗವಹಿಸಿ ಮಾಹಿತಿ ನೀಡುತ್ತವೆ.

**ಮಾಹಿತಿ ತಂತ್ರಜ್ಞಾನ:** ಈ ಸಂಧರ್ಭದಲ್ಲಿ ಪ್ರಮುಖ ಬೆಳೆಗಳಾದ ಶೇಂಗಾ, ಹತ್ತಿ, ಸೋಯಾ ಅವರೆ, ಜೋಳ, ಸೂರ್ಯಕಾಂತಿ, ಔಡಲ, ಮೆಣಸಿನಕಾಯಿ, ಗೋವಿನಜೋಳ ಪ್ರಾತ್ಯಕ್ಷಿಕೆ ತಾಕುಗಳು ಇತ್ಯಾದಿ. ವಿಷಯಗಳಲ್ಲಿ ಆವಿಷ್ಕಾರಗೊಂಡ ತಂತ್ರಜ್ಞಾನದ ಮಾಹಿತಿಯನ್ನು ಒದಗಿಸಲಾಗುವುದು.

**ಹೈಟೆಕ್ ಕೃಷಿ ತರಬೇತಿ:** ಈ ಸಂದರ್ಭದಲ್ಲಿ ಪ್ರತಿ ದಿನವೂ ಹೈಟೆಕ್ ಕೃಷಿ ತಾಂತ್ರಿಕತೆಗಳಾದ ಅಂಗಾಂಶ ಕೃಷಿ, ಸಾವಯವ ಕೃಷಿ, ಎರೆಹುಳು ಕೃಷಿ, ಜೈವಿಕ ಗೊಬ್ಬರಗಳ ಬಳಕೆ, ತುಂತುರು ನೀರಾವರಿ, ಹನಿ ನೀರಾವರಿ, ರಫ್ತು ಗುಣಮಟ್ಟದ ಹೂವು,-ಹಣ್ಣುಗಳು ಹಾಗೂ ಇನ್ನಿತರ ವಿಷಯಗಳ ಬಗ್ಗೆ ವಿಶೇಷ ತರಬೇತಿಗಳನ್ನು ನುರಿತ ತಜ್ಞರು ನೀಡುವರು.

ಇದಲ್ಲದೆ ಉತ್ತಮ ಗುಣಮಟ್ಟದ ಸಸ್ಯಗಳು, ಬೀಜಗಳು ಹಾಗೂ ಪ್ರಕಟಣೆಗಳನ್ನು ಒಂದೇ ಸ್ಥಳದಲ್ಲಿ ಲಭ್ಯವಾಗುವಂತೆ ಇತ್ತೀಚೆಗೆ ಪ್ರಾರಂಭವಾದ ರೈತ ಸೇವಾ ಕೇಂದ್ರದ ಮೂಲಕ ಮಾರಾಟದ ವ್ಯವಸ್ಥೆ ಮಾಡಲಾಗಿದೆ. ಸಸ್ಯ ಸಂರಕ್ಷಣಾ ಉತ್ಪಾದನೆಗಳ ಮಾರಾಟ ಲಭ್ಯವಿದೆ.

ರೈತರು ನೇರವಾಗಿ ವಿಜ್ಞಾನಿಗಳೊಂದಿಗೆ ಸಂಪರ್ಕಿಸಿದರೆ ಕೃಷಿ ರಂಗದಲ್ಲಿನ ಅವರ ಅನೇಕ ಸಮಸ್ಯೆ ಮತ್ತು ಅನುಮಾನಗಳಿಗೆ ಸೂಕ್ತ ಪರಿಹಾರ ನೀಡಲಾಗುವುದು.

ಸುಧಾರಿತ ಬೀಜಗಳು, ಕೀಟನಾಶಕಗಳು, ಯಂತ್ರೋಪಕರಣಗಳು, ಕೃಷಿ ಉತ್ಪನ್ನ ತಯಾರಿಕೆ ಘಟಕಗಳು ಹಾಗೂ ಅಭಿವೃದ್ಧಿ ಇಲಾಖೆಗಳನ್ನು ವರ್ಗೀಕರಿಸಿ, ಸುಸಜ್ಜಿತ ಮಳಿಗೆ ಮೂಲಕ ರೈತರ ಅವಶ್ಯಕತೆಗಳಿಗನುಗುಣವಾಗಿ ಸೂಕ್ತ ಮಾಹಿತಿ ನೀಡಲಾಗುವುದು.

ಮಾವು, ಪೇರಲ, ಚಿಕ್ಕು, ದಾಳಿಂಬೆ ಇತ್ಯಾದಿ ಹಣ್ಣಿನ ಬೆಳೆಗಳು, ಗುಲಾಬಿ, ಮಲ್ಲಿಗೆ ಸೇವಂತಿಗೆ, ಗ್ಲೆಡಿಯೋಲಿಯಾ ಮುಂತಾದ ಹೂಗಳು ಹಾಗೂ ಟೊಮ್ಯಾಟು, ಬದನೆ, ಮೂಲಂಗಿ ಕ್ಯಾಬೇಜ ಒಳಗೊಂಡಂತೆ ಅನೇಕ ತರಕಾರಿ ಬೆಳೆಗಳ ಬಗ್ಗೆ ಆಕರ್ಷಕ ಪ್ರದರ್ಶನ ಜರುಗಲಿದೆ.

ಪಾರ್ಥೇನಿಯಂ ಕಳೆಯನ್ನು ಜೈವಿಕ ಪದ್ಧತಿಯ ಮೂಲಕ ಅದರ ಹತೋಟಿ ಮಾಡಲು ಶತ್ರು ಕಳೆ ಸಸ್ಯಗಳಾದ ಆವರಿಕೆ ಅಥವಾ ತಂಗಡಿ, ಹೆಸರು ತಗಚಿ, ಉಗನಿಮುಳ್ಳು, ರಾಜಗಿರಿ, ಚೆಟ್ಟತಂಗಡಿ, ಸಂಜೆ ಮಲ್ಲಿಗೆ, ಸೀಮೆ ಎಣ್ಣೆಗಿಡ ಅಥವಾ ಕೋಳಿಕಾಲ ಗಿಡ ಕಾಡಮಂತೆ ಅಥವಾ ಸಿರಿಗಿಡ, ಕಾಡು ತಗಚಿ ಅಥವಾ ಕಾಡು ತುಳಸಿ ಇವುಗಳನ್ನು ಬೆಳೆಯುವುದರಿಂದ ನಿಯಂತ್ರಣ ಸಾಧ್ಯ.

**ಜಾನುವಾರು ಪ್ರದರ್ಶನ:** ಉತ್ತಮ ಜಾತಿಯ ಹೋರಿ, ಆಕಳು, ಎಮ್ಮೆ ಆಡು, ಕುರಿ ಮತ್ತು ಸಾಕು ಪ್ರಾಣಿಗಳ ಪ್ರದರ್ಶನ ಮತ್ತು ಸ್ಪರ್ಧೆ ನಡೆಯುತ್ತದೆ. ಉತ್ತಮ ಪ್ರಾಣಿಗಳಿಗೆ ಬಹುಮಾನ ಕೂಡ ಕೊಡಲಾಗುತ್ತದೆ. ಎತ್ತುಗಳಿಗೆ ಪರ್ಯಾಯವಾಗಿ ಕೃಷಿ ಕೆಲಸ ಕಾರ್ಯಗಳಲ್ಲಿ ಕತ್ತೆಗಳನ್ನು ಸಮರ್ಥವಾಗಿ ಬಳಸಬಹುದು. ಈ ಕುರಿತು ವಿವರವಾದ ಮಾಹಿತಿಯನ್ನು ಒದಗಿಸಲಾಗುವುದು.

**ಗೃಹವಿಜ್ಞಾನದ ಪ್ರದರ್ಶನ:** ಗೃಹ ವಿಜ್ಞಾನದ ವಿಷಯಗಳಲ್ಲಿ ಜಾಮ್, ಜೆಲ್ಲಿ, ಕೆಚಪ್, ತಯಾರಿಕೆ, ವಿವಿಧ ಉಡುಪು ಹಾಗೂ ನೇಯ್ಗೆ ಪೇಂಟಿಂಗ್ ವಿಧಾನಗಳು ಹಾಗೂ ರೈತ ಮಹಿಳೆಯರಿಗೆ ಬೇಕರಿ ಪದಾರ್ಥಗಳಾದ ಬ್ರೆಡ್, ಬಿಸ್ಕಿಟ್, ಕೇಕು ಇತ್ಯಾದಿ ಪದಾರ್ಥಗಳ ತಯಾರಿಕೆ ಹಾಗೂ ಪ್ರಾತ್ಯಕ್ಷಿಕೆ ಪ್ರದರ್ಶನ ವ್ಯವಸ್ಥೆ ಇರುವುದು. ಅಲ್ಲದೆ ಅನೇಕ ಗೃಹ ಬಳಕೆಯ ವಸ್ತುಗಳ ಬಗ್ಗೆ ಪ್ರದರ್ಶನ ಏರ್ಪಡಿಸಿ ಮಾಹಿತಿ ನೀಡಲಾಗುವುದು.

**ಕೃಷಿ ಪ್ರಾತ್ಯಕ್ಷಿಕೆ:** ಕೀಟನಾಶಕ ಸಿಂಪರಣೆ, ಸುಧಾರಿತ ತಳಿಗಳು, ಕೃಷಿ ಯಂತ್ರೋಪಕರಣಗಳು ಇತ್ಯಾದಿಗಳ ಬಗ್ಗೆ ಅಲ್ಲದೆ ಬೀಜ, ಗೊಬ್ಬರ ಕ್ರಿಮಿನಾಶಕ ತಯಾರಿಕಾ ಘಟಕಗಳು ಪ್ರಾತ್ಯಕ್ಷಿಕೆ ಹಮ್ಮಿಕೊಂಡು ರೈತರ ಕಾರ್ಯಕೌಶಲ್ಯ ಸುಧಾರಣೆಗಾಗಿ ಸೂಕ್ತ ಮಾಹಿತಿ ಒದಗಿಸುವವು.

ಪ್ರಗತಿಪರ ರೈತರು ತಾವೇ ಅಭಿವೃದ್ಧಿಪಡಿಸಿ ತಮ್ಮ ತಮ್ಮ ಹೊಲ ಮನೆಗಳಲ್ಲಿ ಅಳವಡಿಸಿಕೊಂಡಿರುವ ಹೊಸ ತಾಂತ್ರಿಕತೆಯ ಪ್ರದರ್ಶನವನ್ನು ಏರ್ಪಡಿಸಲಾಗುವುದು. ಇದಲ್ಲದೆ ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಪ್ರಶಸ್ತಿ ಪಡೆದ ರೈತರೊಂದಿಗೆ ವಿಚಾರ ಸಂಕಿರಣ ಏರ್ಪಡಿಸಲಾಗಿದೆ.

ರೈತರ ಅನುಕೂಲಕ್ಕೋಸ್ಕರ ಸವಳು, ಜವಳು ಮತ್ತು ಕ್ಷಾರಯುಕ್ತ ಸಮಸ್ಯಾತ್ಮಕ ಮಣ್ಣು ಮತ್ತು ನೀರಿನ ಪರೀಕ್ಷೆಗಳು ಸ್ಥಳದಲ್ಲಿ ಪರೀಕ್ಷೆ ಮಾಡಿ ಫಲಿತಾಂಶ ನೀಡಲಾಗುವುದು.

ಕೃಷಿ ವಿಷಯದಲ್ಲಿ ನೂತನ ತಂತ್ರಜ್ಞಾನ ಕುರಿತು ಅಭಿವೃದ್ಧಿಪಡಿಸಿದ ಚಲನಚಿತ್ರಗಳನ್ನು ಪ್ರತಿದಿನವೂ ಪ್ರದರ್ಶಿಸುವ ವ್ಯವಸ್ಥೆ ಮಾಡಲಾಗಿದೆ.

ಇನ್ನೂ ಅನೇಕ ತರಹದ ವಿಷಯಗಳು ಹೊಸ ಸಹಸ್ರಮಾನದ ಈ ಕೃಷಿ ಮೇಳದಲ್ಲಿ ಪ್ರದರ್ಶನಗೊಳ್ಳಲಿದೆ. ರೈತರು ಹಾಗೂ ರೈತ ಕಾರ್ಮಿಕರು, ವಿದ್ಯಾರ್ಥಿಗಳು ಕೃಷಿ ಉಪಕರಣಗಳ ಉತ್ಪಾದಕರು ಕೃಷಿಗೆ ಸಂಬಂಧಿಸಿದ ಎಲ್ಲರೂ ಈ ಕೃಷಿಮೇಳದ ಲಾಭ ಪಡೆಯಬಹುದಾಗಿದೆ.

ಶಂಕರ ಶಿಂಧೆ